

ಕಡೆಹಾಯಿಸೊ ಕಮಲಲೋಚನನೆ ಎನ್ನ
ತಡಿಯ ಸೇರಿಸೊ ತರಣಿಶತಕೋಟಿ ತೇಜ ॥ ಪ ॥

ಕಾಕು ಇಂದ್ರಿಯಗಳೆಂಬ ಕಟುಕರಿಗೆ ನಾ ಸಿಲುಕಿ
ಮೇಕೆಯಂದದಿ ಬಾಯ ಬಿಡುತಿಪ್ಪೆನು
ಸಾಕಾರರೂಪ ಸರ್ವೋತ್ತಮನು ನೀ ಕರು
ಣಾಕರನೆಂಬ ಪೆಂಪುಟಾವಡೀಗೆನ್ನ 1

ಹಲವು ಜನ್ಮದ ಪಾಪವೆನಿಪ ಸೊಕ್ಕಾನೆ ಸೊಂ–
ಡಿಲು ಸುತ್ತಿ ಬಂದು ಹಿಂವರಿಸುತಿದೆಕೋ
ಮಲೆವ ದುಷ್ಕೃತವೆಂಬ ಗಜಕೆ ಕೇಸರಿಯೆಂಬ
ಛಲ ಬಿರುದು ತಾಳ್ದ ದೇವರ ದೇವ ನೀನೆನ್ನ 2

ಹಾದಿಗಾಣದೆ ಕೊಲಗಿ ಪೋಪೆನೆಂದರೆ ಭಾವ
ಬೂದಿಯೊಳಾಡಿ ಮುಳುಗಾಡುತಿಹೆನೊ
ಮೇದಿನಿಯ ತಾಳ್ದ ಕೂರ್ಮಾವತಾರನೆ ಬಾಡ
ದಾದಿಕೇಶವರಾಯ ಬೆನ್ನಲೆತ್ತಿಕೊಂಡು 3

– ಕನಕದಾಸರು



ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೪] ಡಿಸೆಂಬರ್ ೧೯೮೩ [ಸಂಚಿಕೆ ೭

# ವಿಷಯಸೂಚಿ

# ಸಂಪಾದಕೀಯ

ಮತ ಮನುಷ್ಯನಿಗೆ ಮದ್ಯದಂತಹುದು. ಮತದ ವಿಷಯವನ್ನು ತುಸು ಬದಿಗಿರಿಸಿ ಮದ್ಯದ ಪ್ರಭಾವವೇನೆಂಬುದನ್ನು ನೋಡುವ. ಆರಂಭದಲ್ಲಿ ಎಲ್ಲರಂತೆಯೇ ಇರುವ ಮನುಷ್ಯ ಮತ್ತು ತಲೆಗೇರಿದಂತೆ ಬಹು ವಿಚಿತ್ರವಾಗಿ ಪ್ರವರ್ತಿಸುತ್ತಾನೆ. ಆ ಸ್ವಲ್ಪ ಹೊತ್ತಿನಲ್ಲಿ ಅವನಿಗೆ ತಾನೇ ಈ ವಿಶಾಲ ವಿಶ್ವದಲ್ಲಿ ವಿಶೇಷಗುಣಗಳಿಂದ ಕೂಡಿದವನು ಎನ್ನಿಸುತ್ತದೆ. ಜೊತೆಯವರೆಲ್ಲ ಯಾವ ಕೆಲಸಕ್ಕೂ ಬಾರದ ನಿಷ್ಪ್ರಯೋಜಕರೆಂದೂ ಎನ್ನಿಸಿ, ತಾನೇ ಸರ್ವಜ್ಞನೆಂಬುವ ದರ್ಪ ಅವನನ್ನು ಇಡಿಇಡಿಯಾಗಿ ಆವರಿಸುತ್ತದೆ. ತನ್ನ ಹಿರಿಮೆಯನ್ನು ನಿರೂಪಿಸಿಕೊಳ್ಳಲು ಎಲ್ಲರಿಗಿಂತ ಹೆಚ್ಚಿಗೆ ಮಾತನಾಡುವುದು. ದಾರಿಯಲ್ಲಿ ಹೋಗುವ ಪ್ರತಿಯೊಬ್ಬನ ಮೇಲೂ ಕೈಮಾಡುವುದೂ, ಯಾರಾದರೂ ಎರಡು ಅಂಟಿಸಿದರೆ 'ನೀನೇ! ಯಾರೋ ಅಂದುಕೊಂಡೆ' ಎನ್ನುವುದೂ, ಸಂತತವಾಗಿ ಕಂಡುಬರುವ ಲಕ್ಷಣ. ಇದು ಎಲ್ಲರ ವಿಷಯದಲ್ಲೂ ನಿಜವೇ. ಮದವೇ ಅಂತಹುದು. ಆದರೆ ಇಲ್ಲೆಲ್ಲ ನಾವು ಹಿಡಿದ ಮೊಲಕ್ಕೆ ಮೂರೇ ಕಾಲು ಎನ್ನುವ ತತ್ತ್ವ ಮತಾಭಿಮಾನಿಗಳಲ್ಲಿ ಸ್ವಲ್ಪ ಹೆಚ್ಚು ಎನ್ನಬೇಕು. ಎಂತಲೇ ಮತ ಮನುಷ್ಯನಿಗೆ ಮದ್ಯದಂತಹುದು ಎಂದು ಬುದ್ಧಿವಂತರು ಹೇಳುತ್ತಿರುತ್ತಾರೆ.

ಆದರೆ ಭರತಖಂಡವೆಂದು ಹೆಸರು ಪಡೆದ ಈ ಭೂಖಂಡ ಮಾತ್ರ ಮೊದಲಿನಿಂದಲೂ ಈ ಪ್ರವೃತ್ತಿಗಳಿಂದ ದೂರವಾಗಿಯೇ ಇದ್ದಿತೆನ್ನಬೇಕು. ಕಾರಣ ಇಲ್ಲಿನದು ಒಂದೇ ಮತವಾಗದಿರುವುದೇ. ಪರಿಣತಬುದ್ಧಿಗಳೂ ತ್ರಿಕಾಲಜ್ಞಾನಿಗಳೂ ಆದ ಮಹರ್ಷಿಗಳು ಸಾಮಾನ್ಯ ಮಾನವ ಜೀವನದ ಸಮಾನ ವಿಶೇಷಗಳನ್ನೆಲ್ಲಾ ಕ್ರೋಡೀಕರಿಸಿ ಹರಿಯಿಸಿದ ಸಂತತ ಜೀವನ ಪ್ರವಾಹದಲ್ಲಿ ಆಪಾದಮಸ್ತಕ ಮುಳುಗಿ ನಡೆದ ದಿವ್ಯದೇಶವಿದು. ಗ್ರೀಕ್, ಹೂಣ, ಶಕ, ಯವನ ಮೊದಲಾದ ಎಷ್ಟೋ ಜನ ತಮ್ಮ ಬಲದರ್ಪಗಳಿಂದ ಈ ಅವ್ಯಾಹತವಾಹಿನಿಗೆ ಅಡ್ಡಗೋಡೆಯನ್ನು ಹಾಕಬೇಕೆಂದು ಪ್ರಯತ್ನಿಸಿದರೂ ಅದು ನಿಲ್ಲದೆ ಈ ದಿನದವರೆಗೆ ಗಾಂಭೀರ್ಯದಿಂದ ಪ್ರವಹಿಸುತ್ತಿದೆಯೆಂದರೆ ಅದಕ್ಕೆ ಕಾರಣ ಆ ದೇವಮಾನವರ ಅಂತರ್ಮಥನಾ –ವಿಭೂತವಾದ ಸುಸಂಘಟಿತವಾದ ಜೀವನ ವಿಧಾನವೇ ಎಂದು ಹೇಳಬೇಕು. ಸರ್ವಮಾನವಸಮತಾಧರ್ಮ ಸರ್ವತ್ರ ಪರಿವ್ಯಾಪಕವೆಂಬ ಸತ್ಯವನ್ನು ಗುರುತಿಸಿದ್ದರಿಂತಲೇ ವಿದೇಶೀಯರೆಲ್ಲ ಬಹುತೇಕ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡೂ ಭಾರತ ಜನತಾ ಪ್ರವಂತಿಯಲ್ಲಿ ಅಂತರ್ಭಾಗವಾಗಿ ವಿಲೀನರಾದರು. ಇರುವೆಯಲ್ಲೂ ಚೇತನವನ್ನು ಕಂಡ ಮಹಾವೀರ ಅಹಿಂಸೆಯೇ ಪರಮಧರ್ಮವೆಂದು ಗೌತಮಬುದ್ಧರುಗಳು ನೆಲೆಸಿದ ದಿವ್ಯದೇಶವಾಯಿತು.

ಮತವ್ಯಾಪ್ತಿಗೆ ಶಕ್ತಿಯ ರೂಪೇ ಪ್ರಮುಖ ಎಂದುಕೊಂಡವರ ಕಾಲದಲ್ಲೂ ಮಾನವೀಯತೆಯೇ ಮುಂದೆ ನಡೆಸಿತು ಎಂದು ಹೇಳಬಹುದು. ತಾನಸೇನ್, ಬೀರಬಲ್, ಗುರುನಾನಕ್, ರಾಸ್ಖಾನ್, ಜಗನ್ನಾಥ ಪಂಡಿತರಾಯ, ಮೊದಲಾದ ಮಹಾ ಚೇತನರುಗಳೆಷ್ಟೋ ತಮ್ಮ ಪ್ರತಿಭಾವಿಶೇಷಗಳಿಂದ ದೇಶವನ್ನು ಉತ್ತೇಜನಗೊಳಿಸಿದರು. ಸಾರ್ವಕಾಲಿಕ ಸಮಾಧಾನ ಸರ್ವಸ್ವವಾದ ಭಗವದ್ಗೀತೆಯನ್ನು ಅರಬ್ಬಿಗೆ ಅನುವಾದಿಸಿದ ಮೊಗಲ್ ಚಕ್ರವರ್ತಿಯಾಗಬೇಕಾಗಿದ್ದ ದಾರಾ. ಇನ್ನೂ ಐವತ್ತು ಉರ್ದೂ ಅನುವಾದಗಳು ಭಗವದ್ಗೀತೆಗೆ ಇವೆಯೆಂದರೆ ಅದಕ್ಕೆ ಕಾರಣ – ರಾಜಕೀಯದ ರಾಜಸವಾದ ತೆರೆಗಳನ್ನು ತೊಲಗಿಸಿಕೊಂಡು ಈ ಜನತೆಯ ಮಾನವತಾಮಾತ್ರಮೂರ್ತಿಯನ್ನು ದರ್ಶಿಸುವ ಅಪೇಕ್ಷೆಯೇ. ಮ್ಯಾಕ್ಸ್‌ಮುಲ್ಲರ್, ಅನಿಬೆಸೆಂಟ್, ನಿವೇದಿತ, ಗುಂಡರ್ಟ್, ಕಿಟ್ಟೆಲ್, ಕಾಲ್ಡ್‌ವೆಲ್, ಬ್ರೌನ್, ಮುಂತಾದ ಹಲವರು ಭಾರತೀಯ ಧರ್ಮಕ್ಕೆ ಅತ್ಯಮೂಲ್ಯ ಸೇವೆ ಸಲ್ಲಿಸಿ ದೇಶದ ಇತಿಹಾಸದಲ್ಲಿ ಸುಸ್ಥಿರ ಸ್ಥಾನವನ್ನು ಪಡೆದಿದ್ದಾರೆ. ಇಂದಿಗೂ ಭಾರತೀಯ ಶಾಸ್ತ್ರನಿಧಿಗಳ ಬಗ್ಗೆ ಪ್ರಾಮಾಣಿಕ ಪರಿಶೋಧನೆಗಳು ಇಲ್ಲಿಗಿಂತ ಹೆಚ್ಚಾಗಿ ಹೊರಗಡೆ ನಡೆಯುತ್ತಿವೆ.

ಆದರೆ ಇಂದು ನಡೆದಿರುವುದೇನು ? ಆ ವಿಶ್ವಮಾನವ ಸೌಭಾತೃ ಧರ್ಮಕ್ಕೆ ತೀರದ ಆಘಾತವಾಗುತ್ತಿದೆ. ಒಳಗೆ ಹೊರಗೆ ಯಾವುದೋ ಒಂದು ರೂಪದಲ್ಲಿ ವಿದ್ವೇಷಾನಲ ಹೊಮ್ಮಿ ಮಾನವೀಯತೆಗೇ ಮಾರಣ ಹೋಮವಾಗುತ್ತಿದೆ. ಬುದ್ಧಧರ್ಮಾಮೃತಪಾನ ಮಾಡಿದ ದೇಶದಲ್ಲಿ ಆ ಧರ್ಮಕ್ಕೆ ಕಾಲದೋಷ ಹಿಡಿದು ಹೇಳಲಾಗದ ಅತ್ಯಾಚಾರಗಳು ನಡೆದವು. ಭಾಷಾರೋಪಗಳಿಗೆ ಹಲವರು ಬಲಿಯಾದರೆ ಮತಕಲ್ಲೋಲದಲ್ಲಿ ಅನೇಕರು ಮರಣಿಸುತ್ತಿದ್ದಾರೆ. ಸಹಿಸಿಕೊಂಡು ಹೋಗಬಲ್ಲ ಸ್ವಲ್ಪ ವಿಷಯವೂ ಹಿರಿದಾಗಿ ಎಷ್ಟೋ ಮಂದಿಯನ್ನು ಬಲಿಗೊಳ್ಳುತ್ತಿದೆ. ಪ್ರಶ್ನೆಯೆಂದರೆ ಇವೆಲ್ಲವೂ ಮತಕಲ್ಲೋಲಗಳೇನು? ಈ ರೀತಿಯ ಕಲ್ಲೋಲಪೂರಿತವಾದ ಭಯದಿಂದ ಪ್ರತಿದಿನವೂ ಬದುಕಬೇಕೆಂದು ಯಾವ ಮತವಾದರೂ ಸೂತ್ರೀಕರಿಸಿದೆಯೇನು ? ಮತವೇ ವಿಭಿನ್ನತೆಗಳಿಗೆ ಕಾರಣವಾದರೆ ಒಂದೇ ಮತದವರಲ್ಲಿ ಎಷ್ಟೋ ದೇಶಗಳಲ್ಲಿ ನಡೆದಿರುವ ಅವ್ಯವಸ್ಥೆಗೆ ಕಾರಣವೇನು? ಹಾಲು ಕುಡಿಯುವ ಹಸುಗೂಸುಗಳನ್ನು ಹೊಸಕಿ, ಉತ್ಸಾಹದ ಯುವತರವನ್ನು ಅಡಗಿಸಿ, ಸಂತಸ ಹೊಂದುವ

(39 ನೇ ಪುಟ ನೋಡಿ)



ರಜತ ರಥೋತ್ಸವ

# ವಾರ್ತಾಲಹರಿ

## ಪ್ರವಾಹ ಪೀಡಿತ ಪ್ರಜೆಗಳ ಪರಿಹಾರಕ್ಕಾಗಿ ಮುಖ್ಯಮಂತ್ರಿಗಳ ನಿಧಿಗೆ ಒಂದು ಕೋಟಿ ರೂ

ತಿ. ತಿ. ದೇವಸ್ಥಾನಗಳ ಹೊಸ ಟ್ರಸ್ಟ್ ಬೋರ್ಡ್ ತಮ್ಮ ಮೊದಲ ಸಮಾವೇಶದಲ್ಲಿ, ಆಂಧ್ರಪ್ರದೇಶದಲ್ಲಿನ ನೆರೆ ಹಾವಳಿಯಲ್ಲಿ ಸಂತ್ರಸ್ತರಾದವರಿಗಾಗಿ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಒಂದು ಕೋಟಿ ರೂ ವಂತಿಗೆಯನ್ನು ನೀಡಲು ತೀರ್ಮಾನಿಸಿತು.

ದಿನಾಂಕ 17–10–83 ರಂದು ಶ್ರೀವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿ ಭಗವತ್ಸೇವೆ, ಯಾತ್ರಿಕರ ಸೇವೆಗಾಗಿ ದೀಕ್ಷಾಬದ್ಧರಾದ ಬೋರ್ಡ್ ಅಧ್ಯಕ್ಷರು ಹಾಗೂ ಸದಸ್ಯರನ್ನು ಶ್ರೀನಿವಾಸನಿಗೆ ಅರ್ಪಿಸಿದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಮಾನವ ಸೇವೆ ಹಾಗೂ ಮಾಧವಸೇವೆಯನ್ನು ಯಶಸ್ವಿಯಾಗಿ ಈ ಬೋರ್ಡ್ ನಿರ್ವಹಿಸಲು ಭಗವಂತನ ಆಶೀರ್ವಾದವನ್ನು ಬೇಡಿದರು.

(39, 40ನೇ ಪುಟ ನೋಡಿ)

ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರ ಮೂಲಕ ಬೋರ್ಡ್ ಅಧ್ಯಕ್ಷ ಪದವಿಯ ಪ್ರಮಾಣವಚನ ಸ್ವೀಕರಿಸುತ್ತಿರುವ ಶ್ರೀ ವಿ. ಕೆ. ವಿ. ಎಸ್. ರಾಜು (ಶ್ರೀ ಕನಕರಾಜು) ಪ್ರಮಾಣವಚನ ಸ್ವೀಕಾರ ಸಮಾರಂಭಕ್ಕೆ ಆಗಮಿಸಿದ ಶ್ರೀ ಎನ್. ಟಿ. ರಾಮರಾವ್ ಅವರನ್ನೂ ಮಧ್ಯದಲ್ಲಿ ನೋಡಬಹುದು.

## ಯಶಸ್ವೀ ಬ್ರಹ್ಮೋತ್ಸವ

ಅಕ್ಟೋಬರ್ ತಿಂಗಳಿನಲ್ಲಿ ತಿರುಮಲೆಯಲ್ಲಿ ಯಶಸ್ವಿಯಾಗಿ ನವರಾತ್ರಿ ಬ್ರಹ್ಮೋತ್ಸವಗಳು ನಡೆದವು. ಬ್ರಹ್ಮೋತ್ಸವದ ಗರುಡೋತ್ಸವದಂದು ಐವತ್ತು ಸಹಸ್ರಕ್ಕೂ ಹೆಚ್ಚಿದ ಯಾತ್ರಿಕರು ಸ್ವಾಮಿಯ ದರ್ಶನ ಪಡೆದರು. ರಜತ ರಥೋತ್ಸವ ದಿನದಂದು ಅತಿಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಸ್ವಾಮಿಯ ರಥಯಾತ್ರೆಯಲ್ಲಿ ಪಾಲುಗೊಂಡು ಗೋವಿಂದ ನಾಮಸ್ಮರಣೆಯಿಂದ ಆಕಾಶ ತುಂಬುವಂತಾಗಿದ್ದಿತು.



# ತಿರುಪ್ಪಾವೈ

ನೀಳಾ ತುಂಗ ಸ್ತನಗಿರಿ ತಟೀ,
ಸುಪ್ತಮುದ್ಬೋಧ್ಯ ಕೃಷ್ಣಂ
ಪಾರಾರ್ಥ್ಯಂ ಸ್ವಂ ಶ್ರುತಿಶತ
ಶಿರಸ್ಸಿದ್ಧಂ ಅಧ್ಯಾಪಯಂತೀ।
ಸ್ವೋಚ್ಛಿಷ್ಟಾಯಾಂ ಸ್ರಜಿ ನಿಗಳಿತಂ
ಯಾ ಬಲಾತ್ಕೃತ್ಯ ಭುಂಕ್ತೇ
ಗೋದಾ ತಸ್ಯೈ ನಮ ಇದಮಿದಂ
ಭೂಯ ಏವಾಸ್ತು ಭೂಯಃ।

ಶ್ರೀ ವೈಷ್ಣವರು ಪ್ರತಿದಿನ ತಮ್ಮ ಪೂಜಾವೇಳೆಯಲ್ಲಿ ಗೋದಾದೇವಿಯಿಂದ ರಚಿತವಾದ ತಿರುಪ್ಪಾವೈ ಪಾಶುರಗಳನ್ನು ಪಠಿಸುವ ಮುಂಚೆ ಶ್ರೀ ಪರಾಶರ ಭಟ್ಟರಿಂದ ಅನುಗ್ರಹೀತವಾದ ಈ ಮಂಗಳಶ್ಲೋಕವನ್ನು ಹಾಡುವ ಪದ್ಧತಿ.

ಮೇಲಿನ ಮಂಗಳ ಶ್ಲೋಕದ ತಾತ್ಪರ್ಯ, ಶ್ರೀ ನೀಳಾದೇವಿಯ ತುಂಗಸ್ತನವೆಂಬ ಪರ್ವತದ ತಪ್ಪಲಲ್ಲಿ ಸುಖವಾಗಿ ನಿದ್ರೆಗೆಯ್ಯುತ್ತಿರುವ ಶ್ರೀ ಕೃಷ್ಣನನ್ನು ಯಾವ ಗೋದೆಯು ಎಬ್ಬಿಸಿ, ಅನಂತ ವೇದಗಳಿಗೆ ಮುಕುಟಪ್ರಾಯವಾಗಿರುವ ಉಪನಿಷತ್ತುಗಳಲ್ಲಿ ಸಿದ್ಧಾಂತ ಮಾಡಲ್ಪಟ್ಟ ತನ್ನ ಶೇಷತ್ವವನ್ನು ಆ ಈಶನಿಗೆ ಅರಿಕೆ ಮಾಡಿದಳೋ, ತನ್ನ ಸಾಕುತಂದೆಯವರಿಂದ ಕಟ್ಟಲ್ಪಟ್ಟ ಹೂವನ್ನು ತಾನು ಮೊದಲು ಮುಡಿದುಕೊಟ್ಟದ್ದನ್ನು ಸ್ವೀಕರಿಸಿದ ಸ್ವಾಮಿ ಬಂಧಿತನಾದನೋ, ಅಂತಹ ಶ್ರೀ ಗೋದಾದೇವಿಯನ್ನು ನಮಸ್ಕರಿಸುತ್ತೇನೆ, ಪುನಃ ಪುನಃ ಈ ನಮಸ್ಕಾರವು ಮುಂದುವರಿಯಲಿ ಎಂಬುವುದಾಗಿದೆ. ಈ ಶ್ಲೋಕ ಒಂದರಲ್ಲೇ ಶ್ರೀ ಗೋದಾದೇವಿಯ ಸಮಗ್ರ ಜೀವನ ರಹಸ್ಯ ಅಡಗಿದೆ.

ದ್ರಾವಿಡ ದೇಶದ ಪುಣ್ಯಕ್ಷೇತ್ರಗಳಲ್ಲಿ ಶ್ರೀ ವಿಲ್ಲಿಪುತ್ತೂರ್ ಎಂಬುವ ದಿವ್ಯಕ್ಷೇತ್ರ ಪ್ರಸಿದ್ಧವಾಗಿದೆ. ಈ ಕ್ಷೇತ್ರಕ್ಕೆ ಮಲ್ಲಿನಾಡೆಂದೂ ಹೆಸರುಂಟು. ಕಾರಣ 'ಮಲ್ಲಿ' ಎಂಬುವ ರಾಣಿ ಈ ಪ್ರದೇಶವನ್ನು ಆಳುತ್ತಿದ್ದಳು. ಕ್ರಿ. ಶ. 780 ರಲ್ಲಿ ಈ ಪ್ರದೇಶಕ್ಕೆ ಶ್ರೀವಲ್ಲಭದೇವನು ರಾಜನಾಗಿದ್ದನು. ಆಗ ವಿಷ್ಣುಚಿತ್ತರೆಂಬುವ ಸಂತರು ಶ್ರೀವಿಲ್ಲಿಪುತ್ತೂರ್ ವಟಪತ್ರಶಾಯಿಯ ಸನ್ನಿಧಿಯಲ್ಲಿ ಮಾಲಾಕಾರ ಕೈಂಕರ್ಯವನ್ನು ಮಾಡುತ್ತಾ ಭಕ್ತಿಪಂಥಕ್ಕೆ ಶಿರೋಭೂಷಣರಾಗಿ ಇದ್ದರು. ಇವರ ಭಕ್ತಿಜ್ಞಾನ ಪ್ರಪತ್ತಿ ಪಾಂಡಿತ್ಯ ಪ್ರತಿಭೆಗಳಿಗೆ ಬೆರಗಾಗಿ ರಾಜಾವಲ್ಲಭದೇವನು ಇವರಿಗೆ 'ಪೆರಿಯಾಳ್ವಾರ್' ಎಂಬುವ ಬಿರುದನ್ನು ದಯಪಾಲಿಸಿದ್ದನು. ಇವರ ಭಕ್ತಿಗೆ ಮೆಚ್ಚಿ ವೈದೋರಿದ ಮುಕುಂದನಿಗೇ ಮಂಗಳಾಶಾಸನ ಮಾಡಿದ ಮಹಾಪುರುಷರು. ವಿಷ್ಣುಚಿತ್ತರು ಪರಮ ಭಕ್ತರು, ವೈರಾಗಿಗಳು. ಭಗವಂತನ ಕೈಂಕರ್ಯ ಒಂದೇ ಅವರ ಗುರಿ. ಶ್ರೀವಿಲ್ಲಿಪುತ್ತೂರಿನ ವಟಪತ್ರಶಾಯಿಗೆ ಪ್ರತಿದಿನ ಹೂಮಾಲೆಯನ್ನು ಕಟ್ಟಿ ಅವನ್ನು ಸಮರ್ಪಿಸಿ ತೃಪ್ತಿಗೊಳ್ಳುವುದೇ ಅವರ ನಿತ್ಯಗೆಲಸ. ಅವರು ಬೆಳೆಸಿದ ತುಲಸೀವನ ನಂದನವನದಂತೆ ಇತ್ತು. ಅಲ್ಲಿ ಜಾಜಿ, ಮಲ್ಲಿಗೆ, ತುಲಸಿ, ಗುಲಾಬಿ, ಶಾವಂತಿಗೆ ತಮ್ಮಗಳ ಪರಿಮಳವನ್ನು ಎಲ್ಲೆಲ್ಲೂ ಹರಡಿದ್ದವು. ವಿಷ್ಣುಚಿತ್ತರು ತಾವು ಬೆಳೆಸಿದ ತುಲಸೀವನದಲ್ಲಿ ಪುಷ್ಪಲತೆಗಳಿಗೆ ಪಾತಿ ಮಾಡುವುದು, ನೀರು ಹೊಯ್ಯುವುದು, ತುಲಸೀಮಾಲೆಯನ್ನು ಕಟ್ಟಿ ಅದನ್ನು ದೇವರಿಗೆ ಅರ್ಪಿಸುವುದರಲ್ಲಿ ತಮ್ಮ ಜೀವನದ ಸಾರ್ಥಕವನ್ನು ಪಡೆದಿದ್ದಾರೆ ಎಂದು ಜನರು ಭಾವಿಸಿ ಅವರಲ್ಲಿ ಅಪಾರವಾದ ಗೌರವವನ್ನು ಬೆಳೆಸಿಕೊಂಡಿದ್ದರು. ಒಂದು ದಿನ ಪಾತಿ ಮಾಡಲು ನೇಗಿಲಿನಿಂದ ಅಗೆಯುತ್ತಿರುವಾಗ ಸುಂದರಹೆಣ್ಣು ಶಿಶುವು ಅಲ್ಲಿ ಗೋಚರವಾಯಿತು. ಅಂದು ಕರ್ಕಾಟಕಮಾಸ ಪೂರ್ವ ಫಲ್ಗುಣೀ ನಕ್ಷತ್ರ. ಚೆಲುವಾದ ಕೂದಲುಳ್ಳ ಹೆಣ್ಣುಮಗುವನ್ನು ಕಂಡು ಆಕೆಯನ್ನು ವಿಷ್ಣುಚಿತ್ತರು "ಶುರುಂಬಾರ್ ಕುರಿಲ್ ಕೋದೈ" ಅಂದರೆ ಅತಿ ಚೆಲುವಿನ ಕೂದಲ ಗೋದೆ—ಎಂದು ಆನಂದದಿಂದ ಮುದ್ದಿಸಿದರು. ಸಂಸ್ಕೃತದಲ್ಲಿ ಗೋ ಎಂದರೆ ಭೂಮಿಯಿಂದ, ದಾ – ಬಂದವಳು. ನೇಗಿಲಿನ ಪಾತಿಯಲ್ಲಿ ಸಿಕ್ಕಿದವಳು ಗೋದೆ ಎಂಬುವ ಅರ್ಥವೂ ಆಗುತ್ತದೆ. ವಿಷ್ಣುಚಿತ್ತರು ಆ ಮಗುವನ್ನು ಶ್ರೀಲಕ್ಷ್ಮಿಯ ಅವತಾರವೆಂದೂ ಜನಕರಾಜನಿಗೆ ಸಿಕ್ಕಿದ ಸೀತಾದೇವಿಯಂತೆ ಈಕೆಯೂ ದೇವಿಯ ಅವತಾರವೆಂದು ತಿಳಿದು ವಿಷ್ಣುಚಿತ್ತರು ಬಹಳ ಆಸಕ್ತಿಯಿಂದ ಪ್ರೀತಿಯಿಂದ ಆ ಮಗುವನ್ನು ಸಾಕಲಾರಂಭಿಸಿದರು. ಗೋದಾದೇವಿ ಸಿಕ್ಕಿದ ದಿನವನ್ನು ಶ್ರೀವೈಷ್ಣವರು "ತಿರುವಾಡಿಪ್ಪೂರಂ'' ಎಂದು ಕರೆದು ಆ ದಿನವನ್ನು ಪವಿತ್ರ ದಿನವಾಗಿ ಭಾವಿಸಿ ಹಬ್ಬವನ್ನು ಆಚರಿಸುತ್ತಾರೆ. ತುಲಸೀ ವನದಲ್ಲಿ ಸಿಕ್ಕಿದ ಗೋದೆಯು ವಿಷ್ಣುಚಿತ್ತರ ಪಾಲಿಗೆ ಬಂದು ಅನರ್ಘ್ಯ ಪುಷ್ಪರತ್ನವೆಂದು ತಿಳಿದು ಬಹು ಮಮತೆಯಿಂದ ಪೋಷಿಸುತ್ತಿದ್ದರು. ಆಕೆ ತಾಯಿಯಿಲ್ಲದ ಮಗುವೆಂದು ನೆರೆ ಹೊರೆಯವರೆಲ್ಲರೂ ತಮ್ಮ ಪ್ರೀತಿಯನ್ನು ಧಾರೆಯೆರೆದು ಆ ಮಗುವಿನ ಲಾಲನೆ ಪಾಲನೆಗಳನ್ನು ಮಾಡುತ್ತಿದ್ದರು. ವಿಷ್ಣುಚಿತ್ತರು ಗೋದೆ ಬೆಳೆದಂತೆಲ್ಲ ಆಕೆಯ ಬಾಲ್ಯದ ಆಟಗಳಲ್ಲಿ ತಾವೂ ಮೈಮರೆತು ಭಾಗಿಗಳಾಗಿ ಭಕ್ತಿಪರವಶರಾಗುತ್ತಿದ್ದರು. ಪವಿತ್ರಕ್ಷೇತ್ರ, ಪರಮ ಪೂಜನೀಯ ತುಲಸೀವನ, ಸಾಕುತಂದೆ ಪೆರಿಯಾಳ್ವಾರ್‌ರಾದರೋ ಪರಮಭಕ್ತರು. ಅಂತಹ ವಾತಾವರಣದಲ್ಲಿ ಬೆಳೆದು ಬಂದ ಗೋದೆ ಕೃಷ್ಣ ಪ್ರಿಯಳಾದಳು. ತಂದೆ ಮಗಳಿಗೆ ನಿತ್ಯವೂ ಭಾಗವತವನ್ನು ಹೇಳುವುದು ಗೋದೆ ಅವನ್ನು ಕೇಳಿ ಆನಂದಪಡುವುದು, ಇವು ನಿತ್ಯಕ್ರಮವಾಗಿದ್ದವು. ಕೃಷ್ಣ ಪ್ರೇಮ ಅವಳ ಉಸಿರಾಯಿತು. ಅವಳ ನರನಾಡಿಗಳಲ್ಲಿ



ಶ್ರೀ ಕಂದಾಡೈ ಕೇಶವನ್

ಕೃಷ್ಣನಾಮ. ಕೃಷ್ಣಕೀರ್ತನೆಗಳಿಂದ ಅವಳ ನಡೆನುಡಿ, ಆಟಪಾಟ, ಹಾವಭಾವ, ಹುಚ್ಚು ಮೆಚ್ಚು ಎಲ್ಲವೂ ಕೃಷ್ಣನ ಬಗ್ಗೆ ಕೇಂದ್ರೀಕೃತವಾಯಿತು. ಕೃಷ್ಣಮತ್ತಳಾದ ಅವಳ ನಿತ್ಯ ವೃತ್ತಿಯಲ್ಲಿ ಕೃಷ್ಣನ ಹೊರತು ಮತ್ತೇನಿಲ್ಲವಾಯಿತು. ಅವಳ ಮಾತು, ಹೃದಯದ ಆಸೆ, ಕೃಷ್ಣನ ಒಲವಿನ ಗೀತೆಗಳಿಂದ ತುಂಬಲಾರಂಭಿಸಿದವು. ಕೃಷ್ಣನ ಕಥೆ ಕೇಳಿ ಮರುಳಾದ ಗೋದೆ ತಾನು ಗೋಪಕನ್ಯೆಯೆಂದೂ, ಶ್ರೀವಿಲ್ಲಿಪುತ್ತೂರು ಗೋಕುಲವೆಂದೂ, ಅಲ್ಲಿನ ವಟಪತ್ರಶಾಯಿ ನಂದ ಕಿಶೋರನೆಂದೂ ಭಾವಿಸಿ ಕೃಷ್ಣನ ಚಿತ್ರ ಬರೆಯುವುದು, ಕೃಷ್ಣನ ಬಗ್ಗೆ ಹಾಡುವುದೂ, ವಿಲ್ಲಿಪುತ್ತೂರಿನ ತನ್ನ ಗೆಳತಿಯರೆಲ್ಲರೂ ಗೋಪಿಯರೆಂದು ಭಾವಿಸಿಕೊಂಡು, ಸದಾ ಕೃಷ್ಣನ ದಿವ್ಯ ನಾಮಗಳನ್ನು ಪಠಿಸುವುದೂ ಅವಳ ನಿತ್ಯ ಜೀವನವಾಯಿತು. ತನ್ನ ಆರಾಧ್ಯದೇವರನ್ನೇ ತನ್ನ ಪತಿಯೆಂದು ಭಾವಿಸಿ ಅವನನ್ನು ಮದುವೆಯಾದಂತೆ ಅವನನ್ನು ಸೇರಿದಂತೆ ದಿನ ದಿನವೂ ಕನಸು ಕಾಣಲಾರಂಬಿಸಿದಳು. ಅವಳ ಅನುರಾಗವು ಪರಿಶುದ್ಧವೂ, ಪವಿತ್ರವೂ ಆಗಿತ್ತು. ವಿಷ್ಣುಚಿತ್ತರು ಪ್ರತಿದಿನ ದೇವರಿಗೆ ಹೂಮಾಲೆಯನ್ನು ಕಟ್ಟಿ, ಸ್ನಾನ ಸಂಧ್ಯಾವಂದನೆಗಳನ್ನು ಮಾಡಿ ಗುಡಿಗೆ ಹೂವನ್ನು ಒಯ್ಯುವ ರೂಢಿ. ನವಸುಗಂಧ ಪೂರಿತವಾದ ಕುಸುಮ ಸಮೂಹವನ್ನು ಕಂಡು ಗೋದೆ ಮೈಮರೆಯುತ್ತಿದ್ದಳು. ಅರಿವಿರದ ಮಲ್ಲಿಗೆಯನ್ನು, ಪೊಳೆವ ಮೊಲ್ಲೆಯ ಹೂವನ್ನು, ಪರಿಮಳ ಬೀರುವ ತುಲಸೀಮಾಲೆಯನ್ನು ಅರಳಿದ ಅಂದದ ಅರವಿಂದವನ್ನು ಕಂಡು ಗೋದೆ ಆನಂದದಿಂದ ಅರಳುತ್ತಿದ್ದಳು. ಆ ಆಮೋದದಿಂದ ತಾನೂ ಕೃಷ್ಣನ ಪರಮ ಪ್ರೇಯಸಿ ಎಂದು ಭಾವಿಸಿ ಕಟ್ಟಿದ ಮಾಲೆಯನ್ನು ತಾನು ಧರಿಸಿ ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ಕಂಡು ಹಿಗ್ಗಿ ತೃಪ್ತಿಗೊಂಡು ನಲವಿನಿಂದ ಮೈಮರೆಯುತ್ತಿದ್ದಳು. ತಾನು ಕೃಷ್ಣನಿಗೆ ಅನುರೂಪಳಾದ ವಧು ಎಂಬ ಭಾವನೆ ಬಂದಾಗ ಹಾಗೂ ಆನಂದ ಬಂಧುರವಾದ ತುಲಸೀಮಾಲೆಯನ್ನು ಧರಿಸಿದಾಗ ತಾನು ಕೃಷ್ಣನ ಸತಿ ಎಂಬುವ ಭಾವನೆ ಮನಸ್ಸಿಗೆ ಬಂದಾಗ, ಅವಳಿಗೆ ಬೇಕಾದ ರಾಗರಂಗ, ರೂಪರಸ, ಭೋಗಭಾಗ್ಯ, ಗಾನತಾನ ದೀಪರೂಪ ಇವೆಲ್ಲವೂ ಅವಳಿಗೆ ಆ ಸ್ಥಳದಲ್ಲೇ ಸಿಗುತ್ತಿತ್ತು. ಆ ತುಲಸೀಮಾಲೆಯೇ ಆಕೆಗೆ ಕಲ್ಪವೃಕ್ಷ. ಹೂವಿನ ಪರಿಮಳದ ಸಂಪರ್ಕದಿಂದ ಅವಳಲ್ಲಿ ನವವಧುವಿನ ಚರ್ಯೆಗಳು ಕಾಣಬರುತ್ತಿದ್ದವು. ಶೃಂಗಾರಲಕ್ಷ್ಮಿಯೇ ತಾನಾಗುತ್ತಿದ್ದಳು. ವಟಪತ್ರಶಾಯಿಗಾಗಿ ಕಟ್ಟಿಟ್ಟಿದ್ದ ಮಾಲೆ ಯಾರೂ ಇಲ್ಲದ ವೇಳೆ ಧರಿಸುವುದೂ ತನ್ನ ಅನುಪಮ ಸೌಂದರ್ಯವನ್ನು ಕನ್ನಡಿಯಲ್ಲಿ ಕಂಡು ಹಿಗ್ಗುವುದೂ ನಿತ್ಯಕ್ರಮವಾಯಿತು. ರೂಢಿ ಮುಂದುವರಿಯಿತು. ಒಮ್ಮೆ ವಿಷ್ಣುಚಿತ್ತರು ಆಕಸ್ಮಿಕವಾಗಿ ಗೋದೆಯ ಈ ಚರ್ಯೆಯನ್ನು ಕಂಡರು, ಅಸಮಾಧಾನಗೊಂಡರು, ಖಿನ್ನರಾದರು. ಮಗಳ ವಾತ್ಸಲ್ಯ ಎಲ್ಲೆಮೀರಿದ್ದರಿಂದ ಆಕೆಯನ್ನು ದಂಡಿಸುವ ಕೆಲಸಕ್ಕೆ ಹೋಗಲಿಲ್ಲ. ಮುಡಿದ ಹೂವನ್ನು ದೇವರಿಗೆ ಅರ್ಪಿಸುವುದು, ಮಹಾಪಾಪ ಎಂದು ಭಾವಿಸಿ ಆ ದಿನ ದೇವರಿಗೆ ಮಾಲೆ ಅರ್ಪಿಸಲಿಲ್ಲ. ಆ ದಿನ ರಾತ್ರಿ ಪರಮಾತ್ಮನು ವಿಷ್ಣುಚಿತ್ತರ ಕನಸಿನಲ್ಲಿ ಕಾಣಿಸಿಕೊಂಡು 'ಪ್ರತಿನಿತ್ಯವೂ ಅರ್ಪಿಸುತ್ತಿದ್ದ ಮಾಲೆ ಈ ದಿನವೇಕೆ ತರಲಿಲ್ಲ' ಎಂಬುವುದಾಗಿ ಕೇಳಲು, ವಿಷ್ಣುಚಿತ್ತರು ನೊಂದವರಾಗಿ ಮುಡಿದ ಹೂವನ್ನು ಸಮರ್ಪಿಸಲಾಗಲಿಲ್ಲ. ಕ್ಷಮಿಸುವಂತೆ ಭಗವಂತನನ್ನು ಕೇಳಿಕೊಂಡರು. ಆಗ ಭಗವಂತನು "ಗೋದೆ ಮುಡಿದ ಹೂವೇ ನನಗೆ ಇಷ್ಟ. ಆ ಹೂವಿನ ಕಂಪೇ ನನಗೆ ಪೆಂಪು. ಇಂದಿನಿಂದ ಗೋದೆ ಮುಡಿದ ಹೂವನ್ನೇ ಸಮರ್ಪಿಸಿ'' ಎಂದು ಅಪ್ಪಣೆಕೊಟ್ಟನು. ಪರಮಾತ್ಮನ ಅಪ್ಪಣೆಯಂತೆ ಗೋದೆ ಮುಡಿದ ಹೂವನ್ನೇ ದೇವರಿಗೆ ಅರ್ಪಿಸುತ್ತಿದ್ದರು. ಆದ್ದರಿಂದಲೇ ಗೋದೆಯನ್ನು "ಶೂಡಿಕೊಡುತ್ತನಾಚ್ಚಿಯಾರ್" ಎಂಬುವುದಾಗಿ ಕರೆಯುತ್ತಾರೆ. ತಮ್ಮನ್ನೂ ವಟಪತ್ರಶಾಯಿಯನ್ನು ಗೋದೆ ವಶಮಾಡಿಕೊಂಡಿದ್ದರಿಂದ ವಿಷ್ಣುಚಿತ್ತರು ಆಕೆಯನ್ನು "ಆಂಡಾಳ್" ಎಂಬುವುದಾಗಿ ಕರೆಯಲಾರಂಭಿಸಿದರು. ತಮ್ಮನ್ನು ಆಳಲು ಬಂದವಳು, ಕೃಷ್ಣನ ಅನನ್ಯ ಶರಣ್ಯೆ ಇವಳು, ಎಂಬುವುದಾಗಿ ವಿಷ್ಣುಚಿತ್ತರು ಭಾವಿಸಿದರು. ಗೋದೆ ಬೆಳೆದಂತೆಲ್ಲ ಆಕೆಗೆ ಕೃಷ್ಣಭಕ್ತಿ ಅಧಿಕವಾಯಿತು. ವಿಷ್ಣುಚಿತ್ತರು ಭರತಖಂಡದ ದಿವ್ಯಕ್ಷೇತ್ರಗಳ ಮಹಿಮೆಯನ್ನು ವಿವರಿಸುತ್ತಿರುವಾಗ, ಶ್ರೀ ರಂಗನಾಥನ ದಿವ್ಯ ರೂಪವನ್ನು ವರ್ಣಿಸಿದಾಗ ಗೋದೆಯು ಅವನಲ್ಲಿ ಪ್ರೇಮಗೊಂಡಳು, ಅವನನ್ನು ಮದುವೆಯಾದಂತೆ ಕನಸು ಕಂಡಳು. ತಾನು ರಂಗನಾಥನ ಆದರ್ಶ ಪ್ರೇಮಿ ಎಂದು ತಿಳಿದು ಅವನ ವಿಶ್ಲೇಷಣೆಯಿಂದ ವಿರಹಗೊಂಡು ಅವನ ಸಂಶ್ಲೇಷಕ್ಕಾಗಿ ಪರಿತಪಿಸಿದಳು. ಕಾತರಗೊಂಡಳು, ನೊಂದಳು, ಉಲ್ಲಾಸದಿಂದ ಉಬ್ಬಿ ಉತ್ಸಾಹದಿಂದ ನಲಿಯುತ್ತಿದ್ದ ನೀಳಾದೇವಿ ದುಃಖ ಸುಮ್ಮಾನದಿಂದ ತತ್ತರಿಸಿದಳು. ಶ್ರೀ ರಂಗನಾಥನನ್ನು ಪಡೆಯುವ ಅಪೇಕ್ಷೆಯನ್ನು ತಂದೆಯಲ್ಲಿ ಅರುಹಿದಳು. ಆಗ ವಿಷ್ಣುಚಿತ್ತರು ಮಗಳಿಗೆ ಭಾಗವತದಲ್ಲಿ ಶ್ರೀಕೃಷ್ಣನನ್ನು ಹೊಂದಲು ಕಾತ್ಯಾಯನೀವ್ರತವನ್ನು ಗೋಪಿಯರು ಮಾಡಿದಂತೆ, ಈಗಲೂ ಗೋದೆ ಮಾರ್ಗಶಿರವ್ರತವನ್ನು ಆಚರಿಸುವಂತೆ ತಿಳಿಸಿದರು.

(34ನೆ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೭ ನೆಯ ಅಧ್ಯಾಯ

(ಮುಂದುವರಿದದ್ದು)

ಶ್ರೀ ಭಗವಾನುವಾಚ–

ಮಯ್ಯಾಸಕ್ತಮನಾಃ ಪಾರ್ಥ
ಯೋಗಂ ಯುಂಜನ್ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ
ಯಥಾ ಜ್ಞಾಸ್ಯಸಿ ತಚ್ಛೃಣು ॥ 1

ಶ್ರೀಕೃಷ್ಣ : ಅರ್ಜುನ, ನನ್ನಲ್ಲಿಯೇ ಮನವನ್ನು ನೆಲೆಸಿ ನನ್ನನ್ನೇ ಶರಣೆಂದು ನಂಬಿ ಯೋಗಸಾಧನೆಯನ್ನು ನಡೆಸುತ್ತ ನಿಸ್ಸಂಶಯವಾಗಿ, ಪೂರ್ಣವಾಗಿ ನನ್ನನ್ನು ಹೇಗೆ ತಿಳಿಯಲಾಗುವುದೋ ಅದನ್ನು ಕೇಳು

ಜ್ಞಾನಂ ತೇಽಹಂ ಸವಿಜ್ಞಾನಂ
ಇದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್
ಜ್ಞಾತವ್ಯಮವಶಿಷ್ಯತೇ ॥ 2

ಯಾವುದನ್ನು ತಿಳಿದಮೇಲೆ ಈ ಜಗತ್ತಿನಲ್ಲಿ ತಿಳಿಯತಕ್ಕುದ್ದೆನ್ನುವುದು ಇನ್ನೊಂದು ಉಳಿಯುವುದಿಲ್ಲವೋ ಅಂಥ ಸೂಕ್ಷ್ಮ ವಿವರದಿಂದ ಕೂಡಿದ ಈ ಜ್ಞಾನಮಾರ್ಗವನ್ನು ಪೂರ್ಣವಾಗಿ ನಿನಗೆ ನಾನು ಹೇಳುತ್ತೇನೆ.

ಮನುಷ್ಯಾಣಾಂ ಸಹಸ್ರೇಷು
ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ
ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥

ಸಾವಿರ ಮನುಷ್ಯರಲ್ಲಿ ಒಬ್ಬನು ಸಿದ್ಧಿಗಾಗಿ ಯತ್ನಿಸುತ್ತಾನೆ. ಹಾಗೆ ಹೆಣಗುತ್ತಾ ಸಿದ್ಧಿ ಪಡೆದ ಸಾವಿರ ಮಂದಿಯಲ್ಲಿ ಯಾವನೋ ಒಬ್ಬನು ಮಾತ್ರ ನನ್ನನ್ನು ಸರಿಯಾಗಿ ತಿಳಿಯುತ್ತಾನೆ.

ಭೂಮಿರಾಪೋಽನಲೋ ವಾಯುಃ
ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ
ಭಿನ್ನಾ ಪ್ರಕೃತಿರಷ್ಟಧಾ ॥ 4

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ – ಹೀಗೆ, ನನ್ನ ಅಧೀನವಾದ ಜಡ ಪ್ರಕೃತಿಯ ಎಂಟು ಬಗೆಯಾಗಿರುವುದು,

ಅಪರೇಯಮಿತಸ್ತ್ವನ್ಯಾಂ
ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ
ಯಯೇದಂ ಧಾರ್ಯತೇ ಜಗತ್ ॥

ಅರ್ಜುನ, ಇದು ಪ್ರಕೃತಿಯ ಕೀಳುಭಾಗ. ಇದಕ್ಕಿಂತ ಮೇಲೆ ಇನ್ನೊಂದು ಪ್ರಕೃತಿಯಿದೆ. ಅದು ಚೇತನಪ್ರಕೃತಿ. ಅದೇ ಈ ಜಗತ್ತನ್ನು ಹಿಡಿದು ನಿಲ್ಲಿಸಿಕೊಂಡಿದೆ.

ಏತದ್ಯೋನೀನಿ ಭೂತಾನಿ
ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ
ಪ್ರಭವಃ ಪ್ರಲಯಸ್ತಥಾ ॥ 6

ಜಗತ್ತಿನಲ್ಲಿರುವುದೆಲ್ಲ ಈ ಎರಡರಿಂದ ಹೊರಹೊಮ್ಮಿದವುಗಳೆಂದು ತಿಳಿ. ನಾನು ಎಲ್ಲ ಜಗತ್ತಿನ ಸೃಷ್ಟಿಗೂ ನಾಶಕ್ಕೂ ಕಾರಣನು.

ಮತ್ತಃ ಪರತರಂ ನಾನ್ಯತ್
ಕಿಂಚಿದಸ್ತಿ ಧನಂಜಯ ।



ಮಯಿ ಸರ್ವಮಿದಂ ಪ್ರೋತಂ
ಸೂತ್ರೇ ಮಣಿಗಣಾ ಇವ ॥ 7

ಅರ್ಜುನ, ನನ್ನಿಂದ ಬೇರೆ [ಹಿರಿಯ] ವಸ್ತುವಿಲ್ಲ. ನೂಲಿನಲ್ಲಿ ಮಣಿಗಳು ಪೋಣಿಸಿರುವಂತೆ ನನ್ನಲ್ಲಿ ಈ ಜಗತ್ತೆಲ್ಲ ಹೆಣೆದುಕೊಂಡಿದೆ.

ರಸೋಽಹಮಪ್ಸು ಕೌಂತೇಯ
ಪ್ರಭಾಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು
ಶಬ್ದಃ ಖೇ ಪೌರುಷಂ ನೃಷು ॥ 8

ಅರ್ಜುನ, ನೀರಿನಲ್ಲಿ ರಸ ನಾನು: ಚಂದ್ರ ಸೂರ್ಯರಲ್ಲಿ ಪ್ರಭೆ ವೇದಗಳಲ್ಲೆಲ್ಲ ಓಂಕಾರ; ಆಕಾಶದಲ್ಲಿ ಧ್ವನಿ; ಪುರುಷರಲ್ಲಿ ಪೌರುಷ.

ಪುಣ್ಯೋ ಗಂಧಃ ಪೃಥಿವ್ಯಾಂ ಚ
ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು
ತಪಶ್ಚಾಸ್ಮಿ ತಪಸ್ವಿಷು ॥ 9

ಭೂಮಿಯಲ್ಲಿ ಕಂಪು ನಾನು. ಬೆಂಕಿಯಲ್ಲಿ ಬೆಳಕು ನಾನು; ಎಲ್ಲ ಪ್ರಾಣಿಗಳಲ್ಲಿ ಬದುಕು ನಾನು; ತಪಸ್ವಿಗಳಲ್ಲಿ ತಪಸ್ಸು ನಾನು.

ಬೀಜಂ ಮಾಂ ಸರ್ವಭೂತಾನಾಂ
ವಿದ್ಧಿ ಪಾರ್ಥ ಸನಾತನಮ್ ।
ಬುದ್ಧಿರ್ಬುದ್ಧಿಮತಾಮಸ್ಮಿ
ತೇಜಸ್ತೇಜಸ್ವಿನಾಮಹಮ್ ॥ 10

ಅರ್ಜುನ, ನನ್ನನ್ನು ಎಲ್ಲ ಚರಾಚರಗಳ ಸನಾತನವಾದ ಬೀಜಶಕ್ತಿಯೆಂದು ತಿಳಿ. ನಾನು ಬುದ್ಧಿವಂತರಲ್ಲಿ ವಿವೇಕಶಕ್ತಿಯಾಗಿದ್ದೇನೆ. ಆತ್ಮಶಕ್ತಿಯುಳ್ಳವರಲ್ಲಿ ಆತ್ಮಶಕ್ತಿಯಾಗಿದ್ದೇನೆ.

ಬಲಂ ಬಲವತಾಂ ಚಾಹಂ
ಕಾಮರಾಗವಿವರ್ಜಿತಮ್ ।
ಧರ್ಮಾವಿರುದ್ಧೋ ಭೂತೇಷು
ಕಾಮೋಽಸ್ಮಿ ಭರತರ್ಷಭ ॥ 11

ಅರ್ಜುನ, ಬಲವಂತರಲ್ಲಿ ಆಸೆ ಆಸಕ್ತಿಗಳಿಗೆ ಬಲಿಯಾಗದ ಬಲ ನಾನು. ಪ್ರಾಣಿಗಳಲ್ಲಿ ಧರ್ಮಸಮ್ಮತವಾದ ಬಯಕೆ ನಾನಾಗಿದ್ದೇನೆ.

ಯೇ ಚೈವ ಸಾತ್ತ್ವಿಕಾ ಭಾವಾ
ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ವಿದ್ಧಿ
ನ ತ್ವಹಂ ತೇಷು ತೇ ಮಯಿ ॥ 12

ಇಷ್ಟೇ ಎಂದಲ್ಲ, ಸಾತ್ತ್ವಿಕವಾದ ರಾಜಸವಾದ ತಾಮಸವಾದ ಏನೆಲ್ಲ ವಸ್ತುಸ್ವಭಾವಗಳಿವೆಯೋ ಅವೆಲ್ಲ ನನ್ನಿಂದಲೇ ಹುಟ್ಟಿದವುಗಳೆಂದು ತಿಳಿ.

## ಭಗವತ್ ಸ್ವರೂಪದ ಅನುಭವ

ನಾನು ಅವುಗಳ ಆಸರೆಯಲ್ಲಿಲ್ಲ. ಅವು ನನ್ನ ಆಸರೆಯಲ್ಲಿವೆ.

ತ್ರಿಭಿರ್ಗುಣಮಯೈರ್ಭಾವೈಃ
ಏಭಿಃ ಸರ್ವಮಿದಂ ಜಗತ್ ।
ಮೋಹಿತಂ ನಾಭಿಜಾನಾತಿ
ಮಾಮೇಭ್ಯಃ ಪರಮವ್ಯಯಮ್ ॥ 13

ಈ ಮೂರು ಬಗೆಯ ಗುಣಗಳಿಂದ ರೂಪುಗೊಂಡ ವಸ್ತುಗಳಿಂದ ಮೋಹಗೊಂಡ ಈ ಎಲ್ಲ ಜಗತ್ತು ಈ ತ್ರಿಗುಣಗಳಿಂದ ಆಚೆಗಿರುವ ನನ್ನ ನಿತ್ಯ ಸ್ವರೂಪವನ್ನು ಅರಿಯಲಾರದಾಗಿದೆ.

ದೈವೀ ಹ್ಯೇಷಾಗುಣಮಯೀ
ಮಮ ಮಾಯಾ ದುರತ್ಯಯಾ |
ಮಾಮೇವ ಯೇ ಪ್ರಪದ್ಯಂತೇ
ಮಾಯಾಮೇತಾಂ ತರಂತಿ ತೇ ॥ 14

ದಿವ್ಯವೂ ಗುಣಮಯವೂ ಆದ ನನ್ನ ಈ ಮಾಯಾ ಶಕ್ತಿಯನ್ನು ದಾಟುವುದು ಕಷ್ಟ. ಯಾರು ನನಗೇ ಶರಣು ಬರುತ್ತಾರೋ ಅವರು ಈ ಮಾಯೆಯನ್ನು ದಾಟಬಲ್ಲರು.

ನ ಮಾಂ ದುಷ್ಕೃತಿನೋ ಮೂಢಾಃ
ಪ್ರಪದ್ಯಂತೇ ನರಾಧಮಾಃ ।
ಮಾಯಯಾಽಪಹೃತಜ್ಞಾನಾ
ಆಸುರಂ ಭಾವಮಾಶ್ರಿತಾಃ ॥ 15

ಮಾಯೆಯ ಮೋಹಕ್ಕೆ ಅರಿವುಗೇಡಿಗಳಾದ, ದುಷ್ಟ ಸ್ವಭಾವದ ದುಷ್ಕರ್ಮಿಗಳು, ಮೂಢರಾದ ಹೀನಮಾನವರು ನನ್ನನ್ನು ಶರಣು ಹೊಂದುವುದಿಲ್ಲ.

ಚತುರ್ವಿಧಾ ಭಜಂತೇ ಮಾಂ
ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ
ಜ್ಞಾನೀ ಚ ಭರತರ್ಷಭ ॥ 16

ಅರ್ಜುನ, ದುಃಖಕ್ಕೊಳಗಾದವನು, ತಿಳಿಯ ಬಯಸುವವನು, ಸುಖ ಸಾಧನೆಗಳನ್ನು ಬಯಸುವವನು, ಆತ್ಮಸ್ವರೂಪವನ್ನರಿತವನು – ಈ ನಾಲ್ಕು ಬಗೆಯ ಪುಣ್ಯಶೀಲರಾದ ಜನರು ನನ್ನನ್ನು ಭಜಿಸುತ್ತಾರೆ

ತೇಷಾಂ ಜ್ಞಾನೀ ನಿತ್ಯಯುಕ್ತಃ
ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ
ಅಹಂ ಸ ಚ ಮಮ ಪ್ರಿಯಃ ॥ 17

ಅವರಲ್ಲಿ ಯಾವಾಗಲೂ ನನ್ನನ್ನೇ ಹೊಂದಿಕೊಂಡು ನನ್ನನ್ನೇ ಪ್ರೀತಿಸುವ ಜ್ಞಾನಿಯು ಹೆಚ್ಚಿನವನು. ಏಕೆಂದರೆ ನಾನು ಜ್ಞಾನಿಗೆ ಬಹಳ ಪ್ರೀತಿಯ ಸೊತ್ತು, ಅವನೂ ನನಗೆ ತುಂಬ ಪ್ರಿಯ.

ಉದಾರಾಸ್ಸರ್ವ ಏವೈತೇ ಜ್ಞಾನೀ
ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ
ಮಾಮೇವಾನುತ್ತಮಾಂ ಗತಿಮ್ ॥ 18

ಈ ಎಲ್ಲರೂ ಮೇಲಾದವರೇ. ಜ್ಞಾನಿಯಾದರೋ ನನ್ನ ಅಂತರಂಗದ ಸೊತ್ತು ಎಂದು ನನ್ನ ಅಭಿಪ್ರಾಯ. ಏಕೆಂದರೆ ಅವನು ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸಿ ಹಿರಿಯ ಆಸರೆಯಾದ ನನ್ನನ್ನೇ ನಂಬಿರುವವನು.

ಬಹೂನಾಂ ಜನ್ಮನಾಮಂತೇ
ಜ್ಞಾನವಾನ್ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ
ಸ ಮಹಾತ್ಮಾ ಸುದುರ್ಲಭಃ ॥ 19

ಅನೇಕ ಜನ್ಮಗಳ ಸಾಧನೆಯ ಕೊನೆಯಲ್ಲಿ ಜ್ಞಾನ ಪಡೆದು ಜ್ಞಾನಿಯು ನನ್ನನ್ನು ಸೇರುವನು. ಎಲ್ಲೆಡೆಯೂ ಭಗವಂತನನ್ನೇ ಕಾಣುವ ಅಂಥ ಮಹಾತ್ಮರು ತೀರವಿರಳ.

ಕಾಮೈಸ್ತೈಸ್ತೈರ್ಹೃತಜ್ಞಾನಾಃ
ಪ್ರಪದ್ಯಂತೇಽನ್ಯದೇವತಾಃ ।
ತಂ ತಂ ನಿಯಮಮಾಸ್ಥಾಯ
ಪ್ರಕೃತ್ಯಾ ನಿಯತಾಃ ಸ್ವಯಾ ॥ 20

ಬೇರೆ ಬೇರೆ ಬಯಕೆಗಳಿಗೆ ಬಲಿಯಾಗಿ ವಿವೇಕ ಕಳೆದುಕೊಂಡುವರು ತಮ್ಮ ತಮ್ಮ ಸ್ವಭಾವಕ್ಕನು ಗುಣವಾಗಿ ಆಯಾ ಕಟ್ಟುಪಾಡುಗಳನ್ನು ಅವಲಂಬಿಸಿ ಬೇರೆ ಬೇರೆ ದೇವತೆಗಳನ್ನು ಭಜಿಸುತ್ತಾರೆ.

ಯೋ ಯೋ ಯಾಂ ಯಾಂ ತನುಂ
ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ
ತಾಮೇವ ವಿದಧಾಮ್ಯಹಮ್ ॥ 21

( 33ನೇ ಪುಟ ನೋಡಿ )

# ನಾರದ ಮಹರ್ಷಿ

ಮಹಾಮಹಿಮರು, ಮುಕ್ತರೇ ಆದಾಗ್ಯೂ ಲೋಕದಲ್ಲಿ ಕಷ್ಟಪಡುತ್ತಿರುವ ಮಾನವರ ಉದ್ಧಾರಕ್ಕಾಗಿ ಲೋಕಹಿತ ದೃಷ್ಟಿಯಿಂದ, ಪರಮಾತ್ಮನಂತೆ ಅವತಾರಮಾಡುತ್ತಾರೆ. ಇವರು ಜ್ಞಾನ, ವೈರಾಗ್ಯ, ತ್ಯಾಗಾದಿ ಗುಣಗಳನ್ನು ಆಚರಿಸುತ್ತ, ಪರಮಾತ್ಮನ ಇಷ್ಟಪ್ರಕಾರ ಕಾರ್ಯತತ್ಪರರಾಗಿ, ಮಾನವರಿಗೆ ಮಾರ್ಗದರ್ಶಕರಾಗಿರುವರು. ಇವರು ಎಲ್ಲ ಯುಗಗಳಲ್ಲಿ ಅವತಾರಮಾಡುವರು. ಇವರು ಯುಗಪುರುಷರು. ಇಂತಹವರಲ್ಲಿ ನಾರದ ಮಹರ್ಷಿಗಳು ಅಗ್ರಗಣ್ಯರು. ಇವರು ಮಾಡಿರುವ ಮಹೋಪಕಾರ, ಮಾನವರಿಗೂ, ದೇವತೆಗಳಿಗೂ ಸಮಾನವಾಗಿ, ಪುರಾಣ ಇತಿಹಾಸ ಪ್ರಸಿದ್ಧವಾಗಿದೆ

ವೇದಾಧ್ಯಯನ ಸಂಪನ್ನನಾದ ಒಬ್ಬ ಭಕ್ತನ ಮನೆಯ ಕೈಂಕರ್ಯ ಪರನಾದ ಸೇವಕನ ಪುತ್ರನಾಗಿ ಇವನು ಹುಟ್ಟಿದನು. ಚಾತುರ್ಮಾಸ ವ್ರತಾನುಷ್ಠಾನಕ್ಕಾಗಿ, ಕೆಲವು ಸಂನ್ಯಾಸಿಗಳು ಅಲ್ಲಿಗೆ ಬಂದರು. ಇವರ ಶುಶ್ರೂಷೆಗಾಗಿ, ಭಕ್ತನು ವೇದವಿದನಾದ ಇವನನ್ನು ನೇಮಿಸಿದನು. ಬಾಲಕನಾಗಿದ್ದರೂ, ಸ್ವಲ್ಪವೂ ಚಾಪಲ್ಯಪಡದೆ, ಆಟ ಪಾಟಗಳಲ್ಲಿ ಆಕ್ಕರೆಯನ್ನು ತೊರೆದು, ಇವನು ಸಂನ್ಯಾಸಿಗಳ ಸೇವೆಮಾಡಿ, ಅವರ ಸಂಪೂರ್ಣ ಅನುಗ್ರಹಕ್ಕೆ ಪಾತ್ರನಾದನು. ಸಂನ್ಯಾಸಿಗಳು ನಿರಂತರ ನಾಲ್ಕುತಿಂಗಳು ನಡೆಸಿದ ಗಾನ, ಪೂಜೆ, ಧ್ಯಾನಾದಿಗಳಲ್ಲಿ ಇವನ ಮನಸ್ಸು ಕೇಂದ್ರೀಕೃತನಾಗಿ, ಜೀವಾತ್ಮನು ಪರಮಾತ್ಮನ ಅಧೀನ ಎಂಬ ವಿಷಯ ಮನದಟ್ಟಾಯಿತು. ಸಂನ್ಯಾಸಿಗಳು ತಮ್ಮ ವ್ರತವನ್ನು ಮುಗಿಸಿಕೊಂಡು ಹೋಗುವಾಗ, ವಿನೀತನಾಗಿ, ಶ್ರದ್ಧೆ ಯಿಂದ ಸೇವೆಮಾಡಿದ ನಾರದನ ವಿಧೇಯತೆಯನ್ನು ಮೆಚ್ಚಿ, ಅವನಿಗೆ ರಹಸ್ಯಜ್ಞಾನವನ್ನು ಉಪದೇಶಮಾಡಿದರು.

ಹೀಗೆ ಅನುಗ್ರಹಪೂರ್ವಕವಾಗಿ ಉಪದೇಶ ಮಾಡಿದ ಮಂತ್ರವನ್ನು ಮನನ ಮಾಡಿದ ನಾರದನಿಗೆ ಭಗವಂತನ ತ್ರಿಗುಣಾತ್ಮಕ ಮಹಿಮೆ ಹೊಳೆಯಿತು,ಭಗವದ್ಗುಣಾನುಭವವುಂಟಾಯಿತು. ಷಡ್ಗುಣೈಶ್ವರ ಸಂಪನ್ನನಾದ ಪರಮಪುರುಷನನ್ನು ಧ್ಯಾನಿಸುತ್ತ ಭಕ್ತಿಯಿಂದಿರುವಾಗ ನಾರದನಿಗೆ ಭಗವದ್ದರ್ಶನ ಕೂಡ ಆಯಿತು. ಇದರಿಂದ ಅಮಿತಾನಂದ ಹೊಂದಿದ ನಾರದನು ಭಗವದ್ದರ್ಶನಕ್ಕಾಗಿ ಪುನಃ ಪ್ರಾರ್ಥಿಸಿದನು. ಆ ದೇಹದಲ್ಲಿರುವವರೆಗೆ ಪುನರ್ದರ್ಶನವಾಗುವುದಿಲ್ಲವೆಂದು ಆಕಾಶವಾಣಿಯು ಅವನಿಗೆ ಕೇಳಿಸಿತು. ಅನಂತರ ನಾರದನು ತನ್ನ ಮಾತಾಪಿತೃಗಳ ಅಂತ್ಯಕಾಲದವರೆಗೆ ಅವರ ಸೇವೆಯನ್ನು ಮಾಡಿ, ತೀರ್ಥಯಾತ್ರೆಗಾಗಿ ಹೊರಟನು. ಆ ಕಾಲದಲ್ಲಿ ಅವನು ನಿತ್ಯ ಸಂತೋಷಿಯಾಗಿ, ವಿಷಯಾಭಿಲಾಷೆಯನ್ನು ತೊರೆದು, ಭಗವನ್ನಾಮಸಂಕೀರ್ತನೆ ಮಾಡುತ್ತ ಪಂಚಭೂತಾತ್ಮಕವಾದ ತನ್ನ ದೇಹವನ್ನು ತೊರೆದು ಭಗವಂತನ ಪಾದಕಮಲಗಳನ್ನು ಸೇರಿದನು.

ಶ್ರೀಮನ್ನಾರಾಯಣನ ನಾಭಿಕಮಲದಲ್ಲಿ ಬ್ರಹ್ಮನು ಸೃಷ್ಟಿಮಾಡುತ್ತಿರುವಾಗ ಅವನ ಪಾದಕಮಲದಿಂದ ನಾರದನು ಹುಟ್ಟಿದನು. ಇವನು ಅಖಂಡ ಬ್ರಹ್ಮಚರ್ಯದಿಂದ ತ್ರಿಲೋಕ ಸಂಚಾರಿಯಾಗಿ ಬ್ರಹ್ಮನಿಂದ ದತ್ತವಾದ ದಿವ್ಯವೀಣೆಯನ್ನು ಧರಿಸಿ, ಭಗವನ್ನಾಮಸಂಕೀರ್ತನೆ ಮಾಡುತ್ತ ಸಂಚರಿಸಿದನು.

ಒಂದುಸಲ ನಾರದನು ಗಂಗಾಸ್ನಾನ ಮಾಡುತ್ತಿರುವಾಗ, ಒಂದು ದೊಡ್ಡ ಆನೆಯನ್ನು ಕಂಡು ವಿಸ್ಮಿತನಾಗಿ, ಇಡೀ ನದಿಯ ಪಾತ್ರವನ್ನು ಆಕ್ರಮಿಸಿದ್ದ ಅಷ್ಟುದೊಡ್ಡ ಆನೆಗೆ ಆಶ್ರಯವಿತ್ತ ಗಂಗಾನದಿಯ ಮಹಿಮೆಯನ್ನು ಕೊಂಡಾಡಿದನು. ಆಗ ಗಂಗೆಯು ಪ್ರತ್ಯಕ್ಷಳಾಗಿ, ಇದರಲ್ಲಿ ತನ್ನ ಪ್ರಭಾವ ಏನೂ ಇಲ್ಲವೆಂದೂ, ತನಗೆ ಆಶ್ರಯವಿತ್ತ ಸಮುದ್ರರಾಜನ ಮಹಿಮೆಯೇ ಕಾರಣವೆಂದು ಹೇಳಿದಳು. ಅನಂತರ ಸಮುದ್ರರಾಜನ ಪ್ರಭಾವವನ್ನು ಕುರಿತು ನಾರದನು ಕೊಂಡಾಡಲು, ಸಮುದ್ರರಾಜನು ಎದುರಿಗೆ ಬಂದು ಇದರಲ್ಲಿ ತನ್ನ ಪಾತ್ರ ಏನೂ ಇಲ್ಲವೆಂದೂ ಬ್ರಹ್ಮದೇವನು ಮೇಘಾದಿಗಳನ್ನು ಸೃಷ್ಟಿಸಿ ಮಳೆ ಬರುವಂತೆ ಮಾಡಿರುವುದು ಮುಖ್ಯವೆಂದೂ, ಬ್ರಹ್ಮನ ಮಹಿಮೆಯೇ ದೊಡ್ಡದೆಂದು ಹೇಳಿದನು. ಆಗ ನಾರದನು ಬ್ರಹ್ಮನನ್ನು ಕುರಿತು ಪ್ರಾರ್ಥಿಸಿದನು. ಕೂಡಲೇ ಬ್ರಹ್ಮನು 'ಹೇ! ನಾರದಾ? ನನ್ನನ್ನೇಕೆ ಹೊಗಳುವೆ! ವೇದದಲ್ಲಿ ಉಕ್ತವಾಗಿರುವಂತೆ, ಸೃಷ್ಟಿಮಾಡುವುದು ನನ್ನ ಕೆಲಸ. ನನ್ನ ಸೃಷ್ಟಿಗೆ ವೇದವೇ ಮೂಲ, ವೇದ ಇಲ್ಲದಿದ್ದರೆ ನನ್ನ ಸೃಷ್ಟಿಕಾರ್ಯ ನಿಂತಂತೆ, ಆದುದರಿಂದ ವೇದದ ಮಹಿಮೆಯನ್ನು ಕೊಂಡಾಡು,' ಎಂದನು.

ಹಾಗೆಯೇ ನಾರದನು ವೇದ ಮಹಿಮೆಯನ್ನು ಕೊಂಡಾಡುತ್ತಿರುವಾಗ, ವೇದವು ಪ್ರತ್ಯಕ್ಷವಾಗಿ ತನ್ನ ಉತ್ಪತ್ತಿಗೆ ಶ್ರೀಮನ್ನಾರಾಯಣನೇ ಕಾರಣನೆಂದೂ, ವೇದ ಪ್ರತಿಪಾದ್ಯನಾದ ಪರಮಪುರುಷನನ್ನು ಹೊಗಳುವಂತೆ ಸೂಚಿಸಿತು. ಹೀಗೆ ನಾರದನು ಪರಮಾತ್ಮನ ಮಹಿಮೆಯನ್ನು ವಿವಿಧ ರೀತಿಯಲ್ಲಿ ಕೊಂಡಾಡಿ ಜಗತ್ತಿನಲ್ಲಿ ಪ್ರಚಾರ ಮಾಡುವುದಾಗಿ ಸಂಕಲ್ಪಮಾಡಿದನು.

ಒಂದು ಸಲ ಸರಸ್ವತೀ ನದೀತೀರದಲ್ಲಿ ವ್ಯಾಸ ಮಹರ್ಷಿಯು ವ್ಯಾಕುಲಚಿತ್ತನಾಗಿ ಕುಳಿತಿರುವಾಗ, ನಾರದನು ಅಲ್ಲಿಗೆ ಬಂದನು. ಬಹ್ಮರ್ಷಿಯನ್ನು ಕಂಡು ವ್ಯಾಸದೇವನು ಅವನನ್ನು ಯಥಾವಿಧಿಯಾಗಿ ಸತ್ಕರಿಸಿ ಪೂಜಿಸಿ, ಕುಶಲ ಸಂಭಾಷಣೆ ಮಾಡಿದನೇ..ನೆ ತನ್ನ ವ್ಯಾಕುಲ ಚಿತ್ತಕ್ಕೆ ಕಾರಣ ತಿಳಿಯದೆ 'ಎಲೈ ಮಹಾತ್ಮನೇ! ಲೋಕೋಪಕಾರ ದೃಷ್ಟಿಯಿಂದ ಮಹಾಭಾರತವನ್ನು ರಚಿಸಿದೆನು, ವೇದಗಳನ್ನು ವಿಭಾಗಿಸಿ ಕೃತಕೃತ್ಯನಾದೆನು ಇಷ್ಟಾದರೂ ನನಗೆ ಚಿತ್ತವ್ಯಾಕುಲ ಉಂಟಾಗಿದೆ. ಇದಕ್ಕೆ ಕಾರಣವನ್ನು ತಿಳಿಸುವೆಯಾ ? ಎನ್ನುತ್ತ 'ಹೇ ! ಬ್ರಹ್ಮರ್ಷಿ', ನೀನು ದಿವ್ಯಜ್ಞಾನಿ. ಚತುರ್ಮುಖ ಬ್ರಹ್ಮನ ಮಾನಸಪುತ್ರ, ನಿನ ಜ್ಞಾನ ಎಲ್ಲೆಲ್ಲಿಯೂ ವ್ಯಾಪಿಸಿದೆ. ಸೂರ್ಯನಂತೆ ನೀನು ತ್ರಿಲೋಕಸಂಚಾರಿ. ಜನರ ಮನೋಗತ ತಿಳಿಯುವ ಸಾಮರ್ಥ್ಯ ನಿನಗಿದೆ. ನನ್ನಲ್ಲಿ ಏನಾದರೂ ಲೋಪದೋಷಗಳಿವೆಯೇ ದಯವಿಟ್ಟು ತಿಳಿಸು' ಎಂದನು.

ಆಗ ನಾರದನು ತನ್ನ ದಿವ್ಯಜ್ಞಾನದಿಂದ ವಿಷಯವನ್ನು ಅರಿತು, 'ಹೇ! ವ್ಯಾಸದೇವಾ ನೀನು ಮಹಾಭಾರತವನ್ನು ರಚಿಸುವಾಗ, ಪುರುಷಾರ್ಥಕ್ಕೆ ಹೆಚ್ಚು ಪ್ರಾಶಸ್ತ್ಯಕೊಟ್ಟು ವಿವರಿಸಿರುವೆ. ಪರಮಾತ್ಮನ ಮಹಿಮಾವರ್ಣನೆ ಅಷ್ಟಾಗಿಲ್ಲ. ಕಾವ್ಯ ಪ್ರಾಸಾದ್ಯಲಂಕಾರಗಳನ್ನು ತುಂಬಿರುವೆ. ಲೋಕ ಪವಿತ್ರವಾದ ಭಗವನ್ನಾಮ ಸಂಕೀರ್ತನೆ ಅಷ್ಟಾಗಿ ಇಲ್ಲ. ಪರಮಾತ್ಮನ ಸಂಕೀರ್ತನ ಮಿಶ್ರವಾದ ಕಾವ್ಯ ಪಾಪನಿವಾರಕ. ಹೇ ! ವ್ಯಾಸಮಹರ್ಷಿೀ, ನೀನು ಲೋಕೋಪಕಾರ ನಿರತನು. ಪರಮಾತ್ಮನ ವೈಭವ ವಿವರಣದಲ್ಲಿ ದೃಢಭಕ್ತಿಯುಳ್ಳವನು. ಮಾನವನಿಗೆ ಶ್ರೇಯಸ್ಸುಂಟಾಗುವಂತೆ ಮಾಡುವುದು ನಿನ್ನ ಉದ್ದೇಶವಾಗಿದೆ. ಆದುದರಿಂದ ಪರಮಾತ್ಮ ಲೀಲಾ ವಿನೋದಗಳನ್ನು ವರ್ಣಿಸಿ, ಭಗವಂತನ ಗುಣಾನುಭವವು ಮಾನವರಿಗೆ ದೊರೆಯುವಂತೆ

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಇನ್ನೊಂದು ಗ್ರಂಥವನ್ನು ರಚಿಸು. ಇದರಿಂದ ನಿನ್ನ ಮನಸ್ಸಿನ ವ್ಯಾಕುಲವು ತೊಲಗಿ, ಶಾಂತಿ, ಸಮಾಧಾನ ದೊರೆಯುವುದು' ಎಂದನು.

'ಹೇ, ವ್ಯಾಸದೇವಾ! ಭಗವಂತನ ಕೃಪೆಯಿಂದಲೇ, ಅವನ ಜನ್ಮರಹಸ್ಯಗಳೆಲ್ಲಾ ನಿನಗೆ ಗೋಚರವಾಗುವುವು. ವಿಷಯಾಭಿಲಾಷೆಯಲ್ಲಿ ನಿರತರಾಗಿರುವ ಮಾನವರಿಗೆ ಭಗವದ್ಭಕ್ತಿ ಮುಖ್ಯ. ಇಂತಹ ಹರಿಸ್ಮರಣೆಯಿಂದ, ಎಲ್ಲ ದುರ್ಗುಣಗಳು ಮಾಯವಾಗುವುವು. ಮಾನವನನ್ನು ಸಂಸಾರಸಾಗರದಿಂದ ದಾಟಿಸಬೇಕಾದರೆ, ಭಕ್ತಿ ಎಂಬ ನಾವೆಗಿಂತ ಬೇರೆ ಸಾಧನ ಇಲ್ಲ. ಭಗವಂತನ ಗುಣಗಾನ ಮಾಡಿದ, ಕೇಳಿದ ನೀನು ಭಗವಂತನ ಲೀಲಾವರ್ಣನೆಯಿಂದ ಕೂಡಿದ, ಭಕ್ತಿಪ್ರಚೋದನೆ ಮಾಡುವ ಇನ್ನೊಂದು ಗ್ರಂಥವನ್ನು ರಚಿಸು. ಆಗ ನಿನ್ನ ಬುದ್ಧಿ, ಭಗವದ್ಭಕ್ತಿ ಎಲ್ಲವೂ ಸ್ಥಿರವಾಗಿ ನಿಲ್ಲುವುವು' ಎಂದನು.

ಭಗವದ್ಭಕ್ತಿಯ ವಿಚಾರವಾಗಿ ನಾರದನು ರಚಿಸಿರುವ ಭಕ್ತಿ ಸೂತ್ರ ಅತ್ಯಂತ ಪ್ರಭಾವಯುತ ಗ್ರಂಥವಾಗಿದೆ. ಇದರಲ್ಲಿ ಎಂಭತ್ತನಾಲ್ಕು ಸೂತ್ರಗಳಿವೆ. ಇಲ್ಲಿ ಅಡಕವಾಗದೇ ಇರುವ ವೇದಾಂತ ವಿಷಯವೇ ಇಲ್ಲ. ಭಕ್ತಾಗ್ರೇಸರನಾದ ನಾರದನು ಸಮಸ್ತ ವೇದಾಂತ ಪರ್ವಗಳನ್ನು ಈ ಸೂತ್ರಗಳಲ್ಲಿ ಅಳವಡಿಸಿದ್ದಾನೆ. ಇಂತಹ ಭಕ್ತಿ ಸೂತ್ರ ರಚಿಸಿದ ಮೇಲೆ, ನಾರದನು ಶ್ರೀಮದ್ಭಾಗವತವನ್ನು ರಚಿಸು ಎಂದು ವ್ಯಾಸರಿಗೆ ತಿಳಿಸಿದನು. ಮೋಕ್ಷಪ್ರಾಪ್ತಿಗೆ ಭಕ್ತಿಯೇ ಸೋಪಾನವೆಂದು ಸಾರಿದ ಕೀರ್ತಿ ನಾರದನಿಗೆ ಸೇರಿದ್ದು. ಮಾನವನು ತನ್ನ ಸಮಸ್ತ ಕ್ರಿಯೆಯನ್ನು ಮಾಡಿ, ಫಲಾಪೇಕ್ಷೆಯನ್ನ ಅಪೇಕ್ಷಿಸಿದೆ, ಭಗವಂತನಿಗೆ ಅರ್ಪಿಸುವುದೇ ಭಕ್ತಿಯ ಪ್ರಥಮ ಕರ್ತವ್ಯ ಭಕ್ತಿಯಲ್ಲಿ ಒಂಬತ್ತು ವಿಧವಿದ್ದರೂ ಇವುಗಳಲ್ಲಿ ಎದ್ದುಕಾಣುವ ಗುಣವೆಂದರೆ ಭಗವಂತನಲ್ಲಿಡಬೇಕಾದ ಶುದ್ಧಿ ಮತ್ತು ಶ್ರೇಷ್ಠತಮ ಪ್ರೀತಿ. ಭಕ್ತನಿಗೆ ಜಾತಿ, ಮತ, ಕುಲಗಳ ನಿರ್ಬಂಧವಿಲ್ಲ. ಅವನಿಗೆ ಎಲ್ಲ ಧರ್ಮವೂ ಭಗವತ್ಪ್ರೀತಿಯೇ. ಎಲ್ಲ ಕ್ರಿಯೆಗಳೂ ಭಗವತ್ಪ್ರೀತಿಗಾಗಿಯೇ ? ಭಕ್ತಿಗಿಂತ ಹೆಚ್ಚಿನದು ಇನ್ನೇನಿಲ್ಲ.

ಮಾನವರಾದ ನಮಗೆ ನಾರದನ ಜೀವನ ಚರಿತ್ರೆಯು ಅನೇಕ ಮಾರ್ಗದರ್ಶನ ಮಾಡುತ್ತದೆ. ಸೇವೆ ಸಲ್ಲಿಸುವ ಪುಣ್ಯಾತ್ಮರು ಮೋಕ್ಷದ ಬಾಗಿಲಿದ್ದಂತೆ. ಸತ್ಸಂಗವು ಅಮೋಘ ರೀತಿಯ ಸಹಾಯ ಕಲ್ಪಿಸುವುದು. ಅದು ಅಸಂಗವನ್ನು ದೂರಮಾಡುವುದು. ಆನಂದ, ಮತ್ತು ಅಭಯವನ್ನುಂಟುಮಾಡುವುದು. ಅಭಯವು ಸತ್ಯದ ದಾರಿ ತೋರಿಸುವುದು. ಸತ್ಯವೇ ಮೋಕ್ಷಕ್ಕೆ ಮಾರ್ಗ.

ಭಕ್ತಿಯೊಂದೇ ಭಗವಂತನನ್ನು ತೋರಿಸತಕ್ಕದ್ದಾರಿ. ಯಾರು ಮೊದಲು ಭಗವದನುಭವ ಹೊಂದಿ ಆನಂದಪಡುವನೋ, ಅಂತಹವನು ಇತರರಿಗೆ ಅದನ್ನು ಕಲಿಸಲು, ತೋರಿಸಲು ಶಕ್ತನಾಗುವನು. ಹತ್ತಿಸಿದ ದೀಪ ಇದ್ದರೆ ತಾನೆ ಇತರ ದೀಪಗಳನ್ನು ಹತ್ತಿಸಲು ಸಾಧ್ಯ. ಭಕ್ತಿಯ ವಿಷಯದಲ್ಲಿ ಯಾರೂ ಸ್ವಾರ್ಥಿಗಳಾಗಬಾರದು. ಇತರರೊಡನೆ ಅದನ್ನು ಅನುಭವಿಸಬೇಕು.

ನಾರದನ ಭಕ್ತಿಸೂತ್ರಗಳು ಜೀವನವನ್ನು ಹಸನುಗೊಳಿಸುತ್ತವೆ. 'ಎಲ್ಲವೂ ದೇವನೇ, ಎಲ್ಲವನ್ನೂ ದೇವನೇ ಬಲ್ಲ' ಎಂಬುದು ನಾರದನ ವಾದ. ಎಲ್ಲವೂ ದೇವನೇ ಎಂದರೆ ಅವನೇ ಸೃಷ್ಟಿಕರ್ತ, ರಕ್ಷಕ ಮತ್ತು ಲಯಕರ್ತ. ಜಗತ್ತೇ ದೇವತಾಸ್ವರೂಪ ಸೂರ್ಯ, ಪ್ರಭೆ ಎರಡೂ ಒಂದೇ, ಹಾಗೆಯೇ ಚಂದ್ರ, ಬೆಳಕು. ಅದೇ ರೀತಿಯಲ್ಲಿ ಭಕ್ತಿ ಇದ್ದರೆ ಜ್ಞಾನ ಜ್ಞಾನದಿಂದ ಭಕ್ತಿ ಇವೆರಡೂ ಇದ್ದರೆ ಜಗತ್‌ಪ್ರೇಮ, ಜಗತ್‌ಸೇವೆ, ಯನ್ನುಂಟುಮಾಡುವುದು ಇದೇ ದೇವತ್ವವಾಗುವುದು ಇಂತಹ ದೇವತ್ವವನ್ನು ನಾರದನು ತಾನುಪಡೆದು, ಅನುಭವಿಸಿ, ಅನಂತರ ಇಡೀ ಜಗತ್ತಿಗೆ ಕಲಿಸಿ, ಪರಮ ಭಾಗವತನಾದನು.

---

# ಶುಕಸಪ್ತತಿಯಲ್ಲಿ ರಾಮಾಯಣ

ಶ್ರೀಮದ್ರಾಮಾಯಣದ ಕತೆಯು ಕನ್ನಡದಲ್ಲಿ ಗದ್ಯ, ಪದ್ಯ, ಚಂಪೂಕಾವ್ಯ, ನಾಟಕ, ಪಂಕ್ತಿ ಯಕ್ಷಗಾನ ರೂಪವಾಗಿ ಹರಿದು ಬಂದಿದೆ. ಇವು ಗಳಲ್ಲದೆ; ಇತರ ಕೆಲವು ಕಾವ್ಯಗಳಲ್ಲಿ ಕೂಡ ಪ್ರಸಂಗತ್ವೇನ ರಾಮಕತೆಗಳ ಉಲ್ಲೇಖಗಳಿರುವುದು ಗಮನಾರ್ಹವಾಗಿವೆ. ಈ ಕತೆಗಳು ಒಂದೊಂದು ಬಗೆಯ ನೂತನ ವಿಚಾರಗಳನ್ನೊಳಗೊಂಡು ಜನಪ್ರಿಯತೆಯನ್ನು ಗಳಿಸಿವೆ. ಅಂತಹ ಕತೆಗಳಲ್ಲಿ ಕನ್ನಡದ ಪದ್ಯಕಾವ್ಯವಾದ ಶುಕಸಪ್ತತಿಯಲ್ಲಿರುವ ರಾಮಾಯಣದ ಪ್ರಸ್ತಾಪವು ಪ್ರಮುಖವಾಗಿದೆ. ಶುಕಸಪ್ತತಿಯಲ್ಲಿ ನೀತಿಬೋಧಕವಾಗಿ ಪತಿ ವ್ರತೆಯರನ್ನು ಕೆಣಕಿದವರಿಗೆ ಒದಗುವ ದುರ್ಗತಿ ಯನ್ನು ಚಿತ್ರಿಸುವ ಎಪ್ಪತ್ತು ಕತೆಗಳಿವೆ. ಇದನ್ನು ವಿರಚಿಸಿದ ಕವಿಯು ತನ್ನ ವಿಚಾರವನ್ನು :

ಧರಣಿಗುತ್ತಮನಾಗಿ ರಾಜಿಪ।
ದೊರೆ ಕೆಳದಿ ಬಸವ ಕ್ಷಿತೀಶನ।
ಚರಣಕಮಲದ ಭೃಂಗ ಶರಜಾನಾಗ-
ಸನ್ಮಂತ್ರಿ॥
ವಿರಚಿಸಿದನೀ ಪುಣ್ಯಕತೆಯನು।
ಹರುಷದಿಂ ಕೇಳ್ವರಿಗೆ ಕೊಡಗಿಯ।
ಪುರದ ಶಂಕರನಾರಯಣನಿತ್ತಪನು ಸಂಪದವ
(೧–೧೯)

ಎಂದು ಹೇಳಿರುವನು. ವಿಜಯನಗರ ಸಾಮ್ರಾಜ್ಯದ ಅವನತಿಯ ಕಾಲದಲ್ಲಿ ತಲೆಯೆತ್ತಿದ ಕೆಳದಿ ಸಂಸ್ಥಾನದ ಅರಸ ಹಿರಿಯ ಬಸವಪ್ಪನ ಮಂತ್ರಿಯಾಗಿದ್ದ ಶರಜಾನಾಗಯ್ಯನು; ದ. ಕ. ಜಿಲ್ಲೆಯ ಕುಂದಾಪುರ ತಾಲೂಕಿನ ಕೊಡಗಿಯ ಶಂಕರ ನಾರಾಯಣ ದೇವರ ಭಕ್ತನಾಗಿದ್ದು, ಇದನ್ನು ಬರೆದಿರುವನು. ತನ್ನ ಕಾವ್ಯದಲ್ಲಿ ಕೊಲ್ಲೂರು ಮೂಕಾಂಬೆಯನ್ನು ಕೂಡ ನೆನೆದಿರುವನು. ಇವನ ಕಾಲಮಾನ ಕ್ರಿ. ಶ. 1672 - 1715 ಎಂದು ಹೇಳಲಾಗಿದೆ. ಈ ಕಾವ್ಯದಲ್ಲಿ 72 ಸಂಧಿಗಳಿದ್ದು, ಪ್ರಾರಂಭದ 3. ಸಂಧಿಗಳು, ಮೂರು ಸಂಪುಟ ಗಳಾಗಿ, ವಿದ್ವಾನ್. ಕೆ. ವೆಂಕಟ್ರಾಯಾಚಾರ್ಯ ಸುರತ್ಕಲ್ಲು, ಇವರಿಂದ ಪ್ರಕಟವಾಗಿರುವುದು ಸಂತೋಷದ ವಿಷಯವಾಗಿದೆ. ಶುಕಸಪ್ತತಿಯ 28 ನೇ ಸಂಧಿಯಲ್ಲಿ ರಾಮಾಯಣದ ಕತೆಯಿದೆ. ಉಕ್ತ ಸಂಧಿಯ 61 ಪದ್ಯಗಳಲ್ಲಿ 40 ಪದ್ಯಗಳು ಸೂಕ್ಷ್ಮವಾಗಿ ರಾಮನ ಕತೆಯನ್ನು ಹೇಳಿವೆ. ಈ ಭಾಗದಲ್ಲಿರುವ ಕೆಲವು ಕೌತುಕದ ಎಂದರೆ ಬೇರೆ ಪ್ರಸಿದ್ಧ ರಾಮಾಯಣಗಳಲ್ಲಿ ಹೇಳದಂತಹ ವಿಷಯಗಳನ್ನು ನಿರೂಪಿಸುವುದು ಲೇಖನದ ಉದ್ದೇಶವಾಗಿದೆ.

ಶ್ರೀ ರಾಮಚಂದ್ರನು ಸೀತಾ, ಲಕ್ಷ್ಮಣ ರೊಂದಿಗೆ ದಂಡಕಾರಣ್ಯದಲ್ಲಿರುವಾಗ, ಒಂದು ದಿನ ಅಲ್ಲಿಯ ಋಷಿಗಳು ಒಟ್ಟಾಗಿ ಬಂದು ರಾಮನ ರೂಪಕ್ಕೆ ಸೋತವರಾಗಿ "ಓ ಪರಂಧಾಮ ತಮ್ಮ ರಮಿಸು" ಎಂದು ಬಿನ್ನವಿಸಿಕೊಳ್ಳುವರು. ಆಗ ರಾಮನು ತಾನು ಏಕಪತ್ನೀವ್ರತಸ್ಥನಾಗಿರುವುದ ರಿಂದ ಮುಂದೆ,

ಮುರಳಿ ವಸುದೇವನಲಿ ಜನಿಸುವೆ
ಹರುಷದಿಂ ನೀವ್ ಗೋಪಿಕಾಸ್ತ್ರೀ।
ಯರುಗಳಾಗೀರೆಂಟು ಸಾವಿರಗಣನೆಯನು
ಪಡೆವು॥
ಧರೆಯೊಳುದಿಸಿರಿ ಸುಖವನೀವೆನು।
ಮರೆಯು ಮಾತಲ್ಲೆಂದು ಮನ್ನಿಸಿ।
ವರುಷ ಹದಿಮೂರಾಗಲಿದ್ದರು ದಂಡಕದವನದಿ॥
(೨೮–೨೯)

ಎಂದು ನಂದಗೋಕುಲದ ಗೋಪಿಕೆಯರ ಪೂರ್ವ ವೃತ್ತಾಂತವನ್ನು ಹೇಳಿರುವುದು ಒಂದು ನೂತನ ಕತೆಯಾಗಿದೆ. ಸೀತಾಪಹರಣ ಪ್ರಸಂಗದಲ್ಲಿರುವ ಕತೆಯು ಕೂಡ ಕುತೂಹಲಕಾರಿಯಾಗಿದೆ.

ಮರಳಿ ಕೇಳು ಚತುರ್ದಶಾಬ್ದದಿ।
ವರಜನಾಸ್ಥಾನದಲಿ ನಿಂತಾ।
ಧರಣಿಜೆಯನವನಿಯಲಿ ಹುದುಗಿಸಿ ಕೃತಕ
ಸೀತೆಯನು॥
ಮೆರೆವ ಮನಿಯಲ್ಲಿಟ್ಟು ಮೃಗವನು।
ತರಲು ಬೇಕೆಂಬಿಚ್ಛೆಯಲಿ ತಾ।
ತೆರಳಿದನು ಸೌಮಿತ್ರಿ ಸಹಿತಲತೀವ ವೇಗದಲಿ॥
(೩೧–೩೨)

ಇಲ್ಲಿ ಕಪಟಮೃಗವನ್ನು ತರಲು ರಾಮನು ಹೋದ ನೆಂದು ಪ್ರಚಲಿತವಿರುವ ಕತೆಗೆ ಬದಲಾಗಿ, ಅವನು, ಲಕ್ಷ್ಮಣನೊಂದಿಗೆ ಮೃಗವನ್ನು ತರಲು ಹೋದ ನೆಂದೂ, ಹೋಗುವಾಗ ಸೀತೆಯನ್ನು ನೆಲದಲ್ಲಿ ಅಡಗಿಸಿಟ್ಟು, ಕೃತಕ ಸೀತೆಯನ್ನು ಮನೆಯಲ್ಲಿರಿಸಿ, ಅಗ್ನಿದೇವನು ಛಾಯಾಸೀತೆಯನ್ನು ರಾವಣನಿಗೆ ದೊರಕಿಸಿದನೆಂದು ಬೇರೆ ಕಾವ್ಯಗಳಲ್ಲಿ ಬಣ್ಣಿಸ ಲಾಗಿದೆ.

ರಾಮ, ಲಕ್ಷ್ಮಣರು ಬೇಟೆಯಿಂದ ಮರಳುವ ಮೊದಲೇ, ರಾವಣನು ಸೀತಾಪಹರಣ ಮಾಡು



ವನು. ದುಃಖಿತರಾದ ರಾಮ, ಲಕ್ಷ್ಮಣರು ಜಾನಕಿಯ ಸುಳಿವನ್ನರಸುತ್ತ ಮುಂದೆ, ಮುಂದೆ ಬರುತ್ತಿರುವಾಗ,

ಮರಳಿ ಹಾ ಸತಿ, ಹಾ ಎನುತ ರಘು।
ವರನು ಕಡುವಿರಹವನು ತಾಳ್ದಿರೆ।
ಸರಸದಲಿ ಘನ ಚಕ್ರವಾಕವು ಮಿಥುನ
ಕೃತ್ಯವನು॥
ಮೆರೆಯಲಾಕ್ಷಣ ಶಾಪವಿತ್ತನು।
ಧರಣಿ ಪತಿ ಕೇಳೆಂದು ನೊಡಲಾ।
ಗೆರಕುವಪ್ಪುದು ದಿವದಿ ನಿಶಿಯಲ್ಲಿಲ್ಲ ಕೇಳೆಂದ॥
(೩೯–೪೦)

ಎಂದು ರಾಮನಿಂದ ಚಕ್ರವಾಕ ಪಕ್ಷಿಗಳಿಗೆ ದೊರೆತ ಶಾಪದ ವೃತ್ತಾಂತವನ್ನು ತಿಳಿಸಿರುವುದು ಅಪೂರ್ವವಾಗಿದೆ. ಬಳಿಕ ಸುಗ್ರೀವನ ಸಖ್ಯ ಬೆಳೆದು ಹನುಮಂತನು ಸೀತೆಯ ವರ್ತಮಾನ ವನ್ನು ತಂದಾಗ, ರಾಮನು

ಮರಳಿ ಕಿಡಿಕಿಡಿಯಾಗಿ ರಾಮನು।
ಮರುತಜನ ಮೊಗವನು ನಿರೀಕ್ಷಿಸೆ।
ಶರಧಿಯನು ದಾಟಲ್ಕೆ ಬಾಲನ ನೀಡಲಾ-
ಕ್ಷಣದಿ॥

ಶ್ರೀ ಪು. ಶ್ರೀನಿವಾಸ ಭಟ್ಟ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ—517501

ಹರಿಕಟಕಸಹಿತೈದಿದನು ದಶ ।
ಶಿರನು ನೀತಿಯ ಮಾತ ಕೇಳದೆ ।
ಪಿರಿದು ಯುದ್ಧವನೆಸಗಲಳಿದರನೇಕ
ರಕ್ಕಸರು ॥ (೨೬–೫೫)

ಸಮುದ್ರವನ್ನು ಕಟ್ಟಲು ಸೇತುಬಂಧನ ಮಾಡಿದ ಕತೆ ಜನಜನಿತವಿದೆ. ಆದರೆ ಇಲ್ಲಿ ಹನುಮಂತನು ಬಾಲವನ್ನು, ಸೇತುವಿನಂತಿರಿಸಿ, ಅದರಲ್ಲಿ ಕಪಿಸೇನೆ ಸಮುದ್ರ ದಾಟಿತೆಂಬುದು ವಿಚಿತ್ರ ಕಥಾನಕವಾಗಿದೆ.

ಈ ಕಾವ್ಯದ ಮೂವತ್ತೆರಡನೆಯ ಸಂಧಿಯಲ್ಲಿ ಮತ್ತೆ ಪುನಃ ರಾಮಾಯಣದ ವೃತ್ತಾಂತವಿದೆ. ಇಲ್ಲಿ ವೇದವತಿಯೆಂಬುವಳು ಅಯೋಧ್ಯೆಯ ಅರಸ ಅಂಬರೀಷನ ಮಗಳು ಎನ್ನಲಾಗಿದೆ. ವಿಷ್ಣುವನ್ನು ವರಿಸುವ ಉದ್ದೇಶದಿಂದ ತಪೋನಿರತಳಾಗಿದ್ದ ಅವಳನ್ನು ರಾವಣನು ಕೆಣಕಿದಾಗ ಅವಳು

ಎಲವೊ ರಾವಣ ಇಷ್ಟು ಕೊಬ್ಬಿಲಿ ।
ಹಳಿಯಬಹುದೇ ಸ್ವಾಮಿಯನು ತವ ।
ಲಲನೆಯುದರದಿ ಜನಿಸಿ, ನೀ ನಿರ್ಮೂಲ
ವಪ್ಪಂತೆ ॥
ಕೊಲಿಸದೇ ನಾ ಬಿಟ್ಟೆನಾದಡೆ ।
ಲಲನೆಯರ ಕುಲಕಪಯಶಸ್ಸನು ।
ತಳುವದೇ ತಂದವಳು ತಿಳಿದಿಹುದೆಂದಳವ-
ನೊಡನೆ ॥ (೩೨–೩೨)

ಎಂದು ತನ್ನ ದೇಹವನ್ನು ಅಗ್ನಿಗರ್ಪಿಸಿ, ತನ್ನ ಪ್ರತಿಜ್ಞೆಯಂತೆ ಮಂಡೋದರಿಯ ಗರ್ಭದಲ್ಲಿ ಜನಿಸುವಳು. ಮಗುವಿನ ಜನನ ಫಲವನ್ನು ಪರಿಶೀಲಿಸಿದ ಜೋಯಿಸರು, 'ಅದು ಕೆಟ್ಟಗಳಿಗೆಯಲ್ಲಿ ಹುಟ್ಟಿದೆ, ಅದನ್ನು ಇಟ್ಟುಕೊಳ್ಳಬಾರದೆ'ನ್ನುವರು. ಮಗುವನ್ನು ಒಂದು ಪೆಟ್ಟಿಗೆಯಲ್ಲಿರಿಸಿ ಸಮುದ್ರಕ್ಕೆ ಎಸೆಯುವನು. ಅದು ಮಿಥಿಲಾ ಪಟ್ಟಣದಲ್ಲಿ ಭೂಗತವಾಯಿತು. ಅಲ್ಲಿಯ ರಾಜ ಜನಕ ಚಕ್ರವರ್ತಿ, ಪುತ್ರಕಾಮೇಷ್ಟಿಗಾಗಿ, ಭೂಶೋಧನೆ ಮಾಡಿದಾಗ, ಆ ಪೆಟ್ಟಿಗೆ ಅವನಿಗೆ ದೊರಕಿತು. ಅದರಲ್ಲಿದ್ದ ಮಗುವಿಗೆ ಜಾನಕಿ ಎಂದು ನಾಮಕರಣ ಮಾಡುವನು. (ಕನ್ನಡ ಅದ್ಭುತ ರಾಮಾಯಣದಲ್ಲಿ ಸೀತಾಜನನದ ಪೂರ್ವಕತೆ ಪ್ರತ್ಯೇಕವಿದೆ. ಅಲ್ಲಿ ಮಂಡೋದರಿಯೇ ಮಗುವನ್ನು ಕುರುಕ್ಷೇತ್ರದಲ್ಲಿರಿಸಿದಳೆಂದು ಹೇಳಲಾಗಿದೆ.) ಹರ ಧನುಸ್ಸನ್ನು ಎತ್ತಿ ರಾಮನು ಸೀತೆಯನ್ನು ವರಿಸಿ, ಅಯೋಧ್ಯೆಗೆ ಬರುವನು.

ಪಿರಿದು ಸಂಭ್ರಮದಿಂದಯೋಧ್ಯಾ ।
ಪುರಿಗೆ ಬಂದಾದಂಪತಿಗಳೀ ।
ರ್ವರು ಮಹೋಲ್ಲಾಸದಲಿರುತ್ತಿರೆ ತನ್ನ
ಮಲತಾಯಿ ॥
ಕರಕರಿಗೆ ಚಿಂತಿಸುವ ತಂದೆಯು ।
ಪರಿಯರಿತು ಸತಿಸಹಿತ ರಾಮನು ।
ಹೊರಟನೈ ವನವಾಸಕಾ ಕೌಸಲೆಯ
ಮರುಕದಲಿ ॥ (೩೨–೫೨)

ಎಂದು ಚುಟುಕಾಗಿ ವರ್ಣಿಸಿರುವುದು ಗಮನೀಯವಾಗಿದೆ. ಅದೇ ರೀತಿ ಸೀತಾಪಹರಣದ ನಂತರ ರಾಮಲಕ್ಷ್ಮಣರು

ಬಳಿಕ ಕೇಳಾ ಋಷ್ಯ[illegible] ।
ಚಲಕೆ ಹೋಗಲ್ಕಾ[illegible]ತನು ।
ಕಲಹಕೊದಗುವ ಕ[illegible]ವನತಿ ಶೀಘ್ರದಿಂ
ಬರಿಸಿ ॥
ತಳುವದೈದಿ ಸಮುದ್ರವನು ಪಿಂ ।
ದಿಳುಹಿ ಕಲಹದೆ ತೊಡಗೆ ರಕ್ಕಸ ।
ಕುಲವದೆಲ್ಲವು ಮಡಿದು ರಾವಣನಸುವ
ನೀಗಿದನು ॥ (೩೨–೫೭)

ಎಂದು ಇಡೀ ಯುದ್ಧಕಾಂಡದ ಕತೆಯನ್ನು ಹೇಳಿರುವನು. ಇಲ್ಲಿ ಕವಿಗೆ ರಾಮಾಯಣದ ಕತೆ ಹೇಳುವುದು ಮುಖ್ಯವಾಗಿರದೆ, ಪತಿವ್ರತೆಯರನ್ನು ಕೆಣಕಿದವರಿಗೆ, ಒದಗುವ ದುರ್ಗತಿಯನ್ನು ಹೇಳುವುದು ಮುಖ್ಯವಾಗಿದೆ. ಆದ ಕಾರಣ ಈ ತೆರನಾದ ವ್ಯತ್ಯಾಸವನ್ನು ಮಾಡಿರಬಹುದು. ಇಲ್ಲಿ ಇರುವ ವಿಚಿತ್ರ ಕಥಾನಕಗಳಿಗೆ ಆಕರ ಯಾವುದು ಎಂದು ನಿರ್ಧರಿಸಲು ಕಷ್ಟವಿದೆ. ಪ್ರಾಚೀನ ಕಾಲದಲ್ಲಿ ರಾಮಾಯಣ, ಮಹಾಭಾರತಗಳು ಸಂಸ್ಕೃತ ಭಾಷೆಯಲ್ಲಿದ್ದು, ಸಾಮಾನ್ಯರಿಗೆ ಅದರಲ್ಲೇನಿದೆ ಎಂದು ತಿಳಿಯತ್ತಿರಲಿಲ್ಲ. ಅಂತಹ ಕಾಲದಲ್ಲಿ, ಕೆಲವು ಪ್ರದೇಶಗಳಲ್ಲಿರುವ ಪ್ರಾಕೃತಿಕ ವೈಚಿತ್ರ್ಯಗಳಿಗೆ, ವಿದ್ವಾಂಸರು ಪುರಾಣದ ಸಂಬಂಧ ಕಲ್ಪಿಸಿರಬಹುದು. ಜನರ ನಂಬಿಕೆ ಬಲವಾಗಲೆಂದು; ಹೇಳಿದ ಕತೆಗಳೇ, ಪ್ರಚಾರಕ್ಕೆ ಬಂದಿರಬಹುದು. ಕಾವ್ಯರಚನೆಗೆ ಅವ್ಯಾಹತವಾದ ದೇಶಸಂಚಾರವೂ ಕವಿಗಳಿಗೆ ಸ್ಫೂರ್ತಿಯನ್ನೀಯುವ ಸಾಧನವಾಗಿತ್ತು. ಕವಿಗಳು ಊರೂರು ತಿರುಗಿದಾಗ, ದೊರಕಿದ ವಿಚಿತ್ರ ಕತೆಗಳನ್ನು, ಮುಂದೆ ತಮ್ಮ ಕೃತಿಗಳಲ್ಲಿ ಸೇರಿಸಿರಬಹುದು. ಇದರಿಂದ ಆ ಕೃತಿಗೆ ಒಂದು ವಿನೂತನತೆ ಬರುತ್ತದೆ ಎಂಬ ಆಶಯವಿರಬಹುದು. ಅದೇ ರೀತಿ ಶರಜಾನಾಗಯ್ಯನು ಕೂಡ ತನ್ನ ಶುಕಸಪ್ತತಿಯ ರಾಮಾಯಣಕ್ಕೆ ನವೀನ ಭಾಗಗಳನ್ನು ಅಳವಡಿಸಿರಬಹುದು. ಕನ್ನಡದ ಸಾಹಿತ್ಯ ಪ್ರಿಯರ ನೆರವಿನಿಂದ ಶುಕಸಪ್ತತಿಯ ಉಳಿದ ಭಾಗಗಳು ಕೂಡ ಪ್ರಕಟವಾಗುವಂತಾಗಲಿ ಎಂದು ಹಾರೈಸೋಣ.



# ನಾಥಮುನಿಗಳು

ಶ್ರೀವೈಷ್ಣವ ಸಂಪ್ರದಾಯ ಪರಂಪರೆಯಲ್ಲಿ ಮೊದಲಿಗರು ಆಳ್ವಾರರು, ಅನಂತರದವರು ಆಚಾರ್ಯರು. ಈ ಆಚಾರ್ಯ ಪರಂಪರೆಯಲ್ಲಿ ಮೊದಲಿಗರು ನಾಥಮುನಿಗಳು.

ಆಳ್ವಾರುಗಳು ಹಾಡಿರುವ ಸ್ತೋತ್ರಗೀತೆಗಳು ಶಿಲವಾಗುತ್ತಿದ್ದವು. ಈ ಸ್ತೋತ್ರಗೀತೆಗಳಾದ ನಾಲಾಯಿರ ದಿವ್ಯಪ್ರಬಂಧಗಳನ್ನು ಸಂಗ್ರಹಿಸಿ ಅವನ್ನು ವ್ಯವಸ್ಥಿತ ರೀತಿಯಲ್ಲಿ ನಾಥಮುನಿಗಳು ಜೋಡಿಸಿದರು. ಇವುಗಳನ್ನೇ "ದ್ರಾವಿಡವೇದ" ಎಂದು ನಾಥಮುನಿಗಳು ಕರೆದರು. ಈ ದ್ರಾವಿಡ ವೇದವನ್ನು ದಕ್ಷಿಣಭಾರತದ ದಿವ್ಯದೇಶಗಳಲ್ಲಿ ಮತ್ತು ಶ್ರೀರಂಗದ ದೇವಾಲಯದಲ್ಲಿ ವೇದಗಳ ಪಠಣದೊಂದಿಗೆ ರಾಗಯುಕ್ತವಾಗಿ ಹಾಡುವ ಸಂಪ್ರದಾಯವನ್ನು ರೂಢಿಗೆ ತಂದರು. ಇವೆಲ್ಲಕ್ಕಿಂತ ಹೆಚ್ಚಾಗಿ ಇವರನ್ನು ನೆನೆಸಿಕೊಳ್ಳುವುದು— ಇವರು ಪ್ರಾಚೀನ ಭಾರತದ ಯೋಗಪರಂಪರೆಯಲ್ಲಿ ಕೊನೆಯವರು ಎಂದು ಹೆಸರುವಾಸಿಯಾಗಿರುವರು. ನಾಥಮುನಿಗಳ ನ್ಯಾಯತತ್ತ್ವವು ವೇದಾಂತದೇಶಿಕರ "ನ್ಯಾಯಸಿದ್ಧಾಂಜನ" ಎಂಬ ಪುಸ್ತಕದಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ.

ಇವರು ವೀರನಾರಾಯಣಪುರದ ಬಳಿಯ 'ಕಾಟ್ಟುಮನ್ನಾರ್‌ಕೋವಿಲ್' ಎಂಬಲ್ಲಿ ಆಣಿ ಮಾಸದ ಅನುರಾಧಾ ನಕ್ಷತ್ರದಲ್ಲಿ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದರು. ಇವರ ಕಾಲ ಕ್ರಿ.ಶ. 823–923. ಇವರು ಸಂಸ್ಕೃತ ಪಂಡಿತರಾದ ಈಶ್ವರಮುನಿಗಳ ಮಕ್ಕಳು. ನಾಥಮುನಿಗಳಿಗೆ ಸಕಾಲದಲ್ಲಿ ಚೌಲ ಉಪನಯನಾದಿಗಳು ಆದವು. ನಂತರದಲ್ಲಿ ವೇದವೇದಾಂಗಗಳನ್ನು, ಸಾಮಾನ್ಯ ಶಾಸ್ತ್ರ ಜ್ಞಾನಗಳನ್ನೂ ಅಭ್ಯಸಿಸಿದರು. ನ್ಯಾಯ, ತರ್ಕ, ಮೀಮಾಂಸೆಗಳನ್ನು ಅಧ್ಯಯನ ಮಾಡಿ ಮಹಾ ವಿದ್ವಾಂಸರೆಂದು ಖ್ಯಾತಿ ಪಡೆದರು.

ಇವರ ಮಕ್ಕಳಾದ ಈಶ್ವರಭಟ್ಟಾಚಾರ್ಯರ ಪುತ್ರರೇ ಆಳವಂದಾರ್ ಎಂದು ಖ್ಯಾತರಾದ ಯಾಮುನಾಚಾರ್ಯರು. ನಾಥಮುನಿಗಳು ಹಿಂದೂ ವಂಶಸ್ಥರಾದ ಪಲ್ಲವರಿಂದ ಬಂದ ರಾಜ್ಯದಲ್ಲಿ ನೆಲಸಿದ್ದರು. ನಾಥಮುನಿಗಳು, ಅವರ ಮತ್ತು ಕುಟುಂಬದವರು ಅನೇಕ ಪುಣ್ಯಕ್ಷೇತ್ರಗಳನ್ನು ನೋಡಲು ಇಚ್ಛಿಸಿದರು. ಅವರ ಕುಟುಂಬವು ಉತ್ತರಭಾರತದಲ್ಲಿ ಯಮುನಾನದೀ ದಡದ ಮೇಲೆ ಮಹಾವಿಷ್ಣುವಿನ ಅವತಾರವಾದ ಶ್ರೀಕೃಷ್ಣನ ಬೃಂದಾವನದಲ್ಲಿ ನೆಲೆಸಿದರು.

ನಾಥಮುನಿಗಳು ಬೃಂದಾವನದಲ್ಲಿ ಇದ್ದಾಗ ದಕ್ಷಿಣ ಭಾರತದಲ್ಲಿ ನಾಥಮುನಿಗಳ ಹಳ್ಳಿಯಾದ ವೀರನಾರಾಯಣಪುರದ ದೇವಸ್ಥಾನವಾದ 'ಕಾಟ್ಟುಮನ್ನಾರ್ ಕೋವಿಲ್'ನಲ್ಲಿ ನೆಲಸಿದ್ದ ಮನ್ನನ್ನಾರ್‌ನ ವಿಷ್ಣುವು ಒಂದು ದಿನ ಇವರ ಕನಸಿನಲ್ಲಿ ಬಂದು ಅವರ ಸ್ವಂತ ಊರಾದ ವೀರನಾರಾಯಣಪುರಕ್ಕೆ ಹಿಂತಿರುಗುವಂತೆ ಆಜ್ಞೆ ಮಾಡಿದಂತೆ ಆಯಿತು. ಅದೇ ಪ್ರಕಾರ ನಾಥಮುನಿಗಳು ತಮ್ಮ ಊರಿಗೆ ಹಿಂತಿರುಗಿದರು.

ಮನ್ನನ್ನಾರದ ದೇವಸ್ಥಾನದ ಅರ್ಚಕರುಗಳು ಇವರಿಗೆ ದೇಗುಲವನ್ನು ಅರ್ಪಿಸುವುದಾಗಿಯೂ, ಇವರಿಗೆ ಇರಲು ಒಂದು ಮನೆ ಮತ್ತು ಮನ್ನನ್ನಾರ್ ದೇವಸ್ಥಾನದಲ್ಲಿ ಒಂದು ಜವಾಬ್ದಾರಿಯುತವಾದ ಸ್ಥಾನವನ್ನು ಕೊಡುವುದಾಗಿ ಹೇಳಿದರು.

ನಾಥಮುನಿಗಳು ತಮ್ಮ ಊರಿನಲ್ಲಿನ ಮನ್ನನ್ನಾರ್‌ರವರಿಗೆ ಸರ್ವವಿಧಕೈಂಕರ್ಯಗಳನ್ನು ಮಾಡಿಕೊಂಡು ಸತ್ಕಾಲಕ್ಷೇಪಮಾಡಿಕೊಂಡು ಇರುತ್ತಿದ್ದರು.

"ಸಿಂಹಾಚಲಂ ಶ್ರೀಕೂರ್ಮಂ
ಪುರುಷೋತ್ತಮಂ ಬದರೀನಾರಾಯಣಂ
ನೈಮಿಶಂ ಶ್ರೀಮದ್ದ್ವಾರಾವತೀ
ಪ್ರಯಾಗ ಮಧುರಾಯೋ
ಧ್ಯಾಗಯಃ ಪುಷ್ಕರಂ ಸಾಳಗ್ರಾಮಗಿರಿಂ ॥"

ಈ ರೀತಿಯಲ್ಲಿ ಪ್ರಖ್ಯಾತಿ ಪಡೆದ ಉತ್ತರಭಾರತದ ದಿವ್ಯಕ್ಷೇತ್ರಗಳನ್ನು ಸಂದರ್ಶಿಸಬೇಕೆನ್ನುವ ಅಭಿನಿವೇಶವು ಅವರಲ್ಲಿ ಉದಯಿಸಿತು. ಅದರಂತೆ ಆ ಕ್ಷೇತ್ರಗಳನ್ನು ಪರಿವಾರ ಸಮೇತ ಸಂದರ್ಶಿಸಿದರು. ಅನಂತರ ದಕ್ಷಿಣದ ಕ್ಷೇತ್ರಗಳನ್ನೂ ಸಂದರ್ಶಿಸಿ ಮಂಗಳಾಶಾಸನಗಳನ್ನು ನುಡಿದರು.

ಈ ರೀತಿ ಯಾತ್ರೆಯನ್ನು ಕೈಗೊಂಡ ನಂತರ ತಮ್ಮ ಊರಿನಲ್ಲಿನ ಮನ್ನನ್ನಾರ್ ಸನ್ನಿಧಿಯಲ್ಲಿ ಭಗವತ್ ಭಾಗವತ ಕೈಂಕರ್ಯಗಳನ್ನು ನಿರ್ವಹಿಸುತ್ತಾ ಅಧ್ಯಾತ್ಮ ಶಾಸ್ತ್ರಗಳನ್ನು ಉಪದೇಶಿಸುತ್ತಾ ಇದ್ದರು.

ಆಗ ಅಲ್ಲಿನ ಸುತ್ತಮುತ್ತಲ ಬ್ರಾಹ್ಮಣನಗರದಲ್ಲಿ ನಾಥಮುನಿಗಳೇ ಅತಿಶ್ರೇಷ್ಠ ಸಂಸ್ಕೃತ ದ್ರಾವಿಡ ವಿದ್ವಾಂಸರಾಗಿದ್ದರು. ಆದಕಾರಣ ಇವರನ್ನು ಶ್ರೀವೈಷ್ಣವ ಪಂಗಡಕ್ಕೆ ಸ್ವಾಗತಿಸಿ ಮುಂದಾಳುತನವನ್ನು ಕೊಟ್ಟರು. ಶ್ರೀವೈಷ್ಣವರಿಂದ ನಾಥಮುನಿಗಳಿಗೆ ಮತ್ತು ಅವರ ಕುಟುಂಬಕ್ಕೆ ಆರ್ಥಿಕ ಸಹಾಯ ದೊರೆಯಿತು. ಇವರು ತಮ್ಮ ಕೈಂಕರ್ಯವನ್ನು ಭಕ್ತಿಪೂರ್ವಕವಾಗಿ ಉತ್ಸಾಹದಿಂದ ಮಾಡುವಂತಾಯಿತು.

ಆಳ್ವಾರುಗಳು ವಿವಿಧ ಜಾತಿಯವರುಗಳಾಗಿದ್ದರು. ಕೆಲವರು ಬ್ರಾಹ್ಮಣರು, ಕೆಲವರು ಶೂದ್ರರು, ಒಬ್ಬರು ಹರಿಜನರೂ ಆಗಿದ್ದರು. ಅವರುಗಳು ಹಾಡಿರುವ ದಿವ್ಯವಾದ ಸ್ತೋತ್ರಗಳು ಬೇರೆ ಬೇರೆ ಜಾತಿಯವರುಗಳಿಂದ ಮಾಡಲ್ಪಟ್ಟಿವೆ.

ಹೀಗಿರುವಾಗ ಅಲ್ಲಿಗೆ ತಿರುನಾರಾಯಣಪುರ (ಮೇಲುಕೋಟೆ) ಪ್ರಾಂತ್ಯದಿಂದ ಬಂದಿದ್ದ ಕೆಲವು ಶ್ರೀವೈಷ್ಣವರು ಮನ್ನನ್ನಾರ್ ಸನ್ನಿಧಿಯಲ್ಲಿ ತಮಗೆ ತಿಳಿದ ಸ್ತೋತ್ರಪಾಠಗಳನ್ನು ಅನುಸಂಧಾನ ಮಾಡಿದರು. ಅದರಲ್ಲಿನ 'ಆರಾವಮುದೇ ಅಡಿಯೇನುಡಲಮ್' ಎನ್ನುವ ದಶಕವನ್ನು ಕಿವಿಗೆ ಇಂಪಾಗಿ ಅನುಸಂಧಾನಗೈದರು. ಅದರಲ್ಲಿನ ಕಡೆಯ ಪಾಶುರದಲ್ಲಿನ 'ಕುಳಲಿಲ್ ಮಲಿಯ ಚೊನ್ನ ಓರಾಯಿರುತ್ತುಳ್ ಇಪತ್ತುಮ್' ಎನ್ನುವುದನ್ನು ಹಾಡಿದಾಗ, ನಾಥಮುನಿಗಳು ಅದನ್ನು ಆಲಿಸಿ ಆನಂದಪರವಶರಾದರು. ನಂತರ ಅವರು ಹತ್ತು ಪಾಶುರಗಳನ್ನು ಹಾಡಿದಾಗ, ನಾಥಮುನಿಗಳು, ಆ ಕಾವ್ಯ ಸೌಂದರ್ಯದಿಂದ ಮುಗ್ಧರಾದರು. ಅವರ ಮುಖಾಂತರ ಇನ್ನೂ ಸಾವಿರ ಪಾಶುರಗಳಿರುವುದನ್ನು ಅರಿತರು, ಆಗ ಶ್ರೀವೈಷ್ಣವರನ್ನು ನೋಡಿ 'ಸ್ವಾಮಿ, ಈ ಸಾವಿರ ಪಾಶುರಗಳು ತಮ್ಮ ಮುಖಸ್ಥವಾಗಿಯೇ?' ಎಂದು ಕೇಳಿದರು. ಅವರು 'ಸ್ವಾಮಿ, ಈ ಹತ್ತು ಪಾಶುರಗಳಲ್ಲದೆ ಬೇರೆಯವು ಬರುವುದಿಲ್ಲ. ಬೇರೆ ಪಾಶುರಗಳ ಬಗ್ಗೆ ಗೊತ್ತಿಲ್ಲ' ಎಂದರು.

"ನಿಮ್ಮ ದೇಶದಲ್ಲಿ ಇದರ ಶ್ರೀಕೋಶವೇನಾದರೂ ಇದೆಯೇ? ಸಾವಿರ ಪಾಶುರಗಳ ಅಧಿಕಾರಿಯಾಗಿರುವ ಮಹನೀಯರು ಯಾರಾದರೂ ಇದ್ದಾರೇನು?" ಎಂದು ಕಾತುರದಿಂದ ಪ್ರಶ್ನಿಸಿದರು.

ಅವರು 'ಅಂತಹವರು ಯಾರೂ ಇಲ್ಲವೆಂದು' ಹೇಳಿ ದೇವರ ತೀರ್ಥಪ್ರಸಾದಗಳನ್ನು ಸ್ವೀಕರಿಸಿ ಹೊರಟು ಹೋದರು.

**ಶ್ರೀಮತಿ ಬಿ. ಎಸ್. ವಿಜಯಮ್ಮ**

ಆದರೆ ನಾಥಮುನಿಗಳಿಗೆ ಅಂದು ಮೊದಲು ಹಗಲು ರಾತ್ರಿ ಆ ತಿರುವಾಯ್‌ಮೊಳಿಯದೇ ಚಿಂತೆಯಾಯಿತು. "ಕುರುಹೂರ್‌ಚ್ಚಡಗೋಪನ್, ಆಯಿರತ್ತುಳ್ ಇಪ್ಪತ್ತುಮ್" ಎಂದಿರುವುದರಿಂದ ಆ ಶಠಗೋಪರು ಜನಿಸಿದ ಊರಿನಲ್ಲಿ ಆ ಕಾವ್ಯವೇನಾದರೂ ದೊರೆಯುವುದೇನೋ ಎಂದು ಯೋಚಿಸಿ, ಆ ನಿರ್ಧಾರದಂತೆ ಆಳ್ವಾರ್ ತಿರುನಗರಿಗೆ ಬಂದರು.

ಅಲ್ಲಿ ಪೊಲಿನ್ದು ನಿನ್ರಪಿರಾನ್ ಎನ್ನುವ ನಮ್ಮಾಳ್ವಾರರನ್ನು ಸೇವಿಸುತ್ತಿದ್ದ ಮಧುರಕವಿಗಳ ಶಿಷ್ಯ ಪರಂಪರೆಯಲ್ಲಿ ಓರ್ವರಾದ ಪರಾಂಕುಶರೆನ್ನುವವರು ನಾಥಮುನಿಗಳಿಗೆ ದೊರೆತರು. ಅವರಿಗೆ ಪ್ರಣಾಮಮಾಡಿ ತಾವು ಬಂದ ಕಾರಣವನ್ನು ತಿಳಿಸಿ, "ಇಲ್ಲಿ ತಿರುವಾಯ್‌ಮೊಳಿ ಆಯಿರವನ್ನು ತಿಳಿದಿರುವವರು ಯಾರಾದರೂ ಇದ್ದಾರೆಯೇ? ಶ್ರೀ ಕೋಶವೇನಾದರೂ ಉಂಟೇನು?" ಎಂದು ಪ್ರಶ್ನಿಸಿದರು.

ಇದನ್ನು ಆಲಿಸಿದ ಪರಾಂಕುಶರು ಗದ್ಗದ ಸ್ವರದಲ್ಲಿ ಹೇಳಿದರು, "ತಿರುವಾಯ್‌ಮೊಳಿ ಮತ್ತು ಇತರೇ ದಿವ್ಯಪ್ರಬಂಧಗಳು ಜಗತ್ತಿನಿಂದ ಲೋಪಗೊಂಡೇ ಬಹಳ ಕಾಲವಾಯಿತು. ಆದರೂ ನಮ್ಮ ಕುಲಪ್ರಧಾನರಾದ ಶ್ರೀ ಮಧುರಕವಿಗಳು ಪ್ರಸಾದಿಸಿದ "ಕಣ್ಣಿನುಣ್ ಶಿರುತ್ತಾಂಬು"ಎನ್ನುವ ಪ್ರಬಂಧವಿದೆ. ಅದನ್ನು ಆಳ್ವಾರರ ಎದುರಿಗೆ ಅವರ ತಿರುವಡಿಯನ್ನು ಧ್ಯಾನಿಸುತ್ತಾ ಏಕಾಗ್ರಚಿತ್ತದಿಂದ ನಿಯಮದೊಂದಿಗೆ ಹನ್ನೆರಡು ಸಾವಿರ ಸಲ ಜಪಿಸಿದಲ್ಲಿ ಆ ಆಳ್ವಾರರು ಪ್ರಸನ್ನರಾಗಿ ಆ ಪ್ರಬಂಧಗಳನ್ನು ಕರುಣಿಸುವರು ಎಂಬುದನ್ನು ನಾವು ಕೇಳಿ ಬಲ್ಲೆವು".

ಅದನ್ನು ಕೇಳಿದ ನಾಥಮುನಿಗಳ ಮನಸ್ಸು ತಿಳಿಗೊಂಡು, ಅತ್ಯಂತ ಸಂತೋಷದಿಂದ ಅವರಿಗೆ ವಂದಿಸಿ,

"ಸ್ವಾಮಿ, ಆ ಕಣ್ಣಿನುಣ್ ಶಿರುತ್ತಾಂಬು ಪ್ರಬಂಧದ ಪರಿಚಯ ಈ ದಾಸನಿಗೆ ಮಾಡಿ ಕೊಡಿ",

– ಎಂದು ವಿನಯದಿಂದ ಪ್ರಾರ್ಥಿಸಿದರು. ಇದರಿಂದ ಪರಾಂಕುಶ ದಾಸರು ಪ್ರಸನ್ನರಾಗಿ ಆ ಪ್ರಬಂಧವನ್ನು ನಾಥಮುನಿಗಳಿಗೆ ಅಧ್ಯಯನ ಮಾಡಿಸಿದರು.

ನಂತರ ನಾಥಮುನಿಗಳು ಅದನ್ನು ಅಧಿಕರಿಸಿ, ಮುಖಸ್ಥ ಮಾಡಿಕೊಂಡು ತಿರುಪ್ಪುಳಿಯಾಳ್ವಾರರು ನಿಯಮಿಸಿದ ನಿಯಮಗಳಿಗೆ ಬದ್ಧರಾಗಿ ಈ ಪ್ರಬಂಧವನ್ನು ಹನ್ನೆರಡು ಸಾವಿರ ಸಲ ಜಪಿಸಿದರು.

ಇದು ಪೂರ್ತಿಯಾಗುವಷ್ಟರಲ್ಲಿಯೇ ಪೆರಿಯ ಪಿರಾಟ್ಟಿಯಾದ ಶ್ರೀ ಮಹಾಲಕ್ಷ್ಮಿಯಿಂದ ಆಜ್ಞಾಪಿಸಲ್ಪಟ್ಟವರಾದ ನಮ್ಮಾಳ್ವಾರರು ನಾಥ

ಮುನಿಗಳ ತಪಸ್ಸಿನಿಂದ ಆರ್ದ್ರರಾಗಿ ಪರೋಕ್ಷವಾಗಿ ಹತ್ತಿರದಲ್ಲೇ ನಿಂತು, ಅವರು ಅಶರೀರವಾಕ್ಕಿನ ಮುಖಾಂತರ "ನಿಮ್ಮ ಮನೋಭಿಲಾಷೆಯೇನು? ತಿಳಿಸಿ" ಎಂದು ಕೇಳಿದಂತೆ ಆಯಿತು. ನಾಥಮುನಿಗಳು ದಿವ್ಯ ಪ್ರಬಂಧಗಳನ್ನು ಕೇಳಬೇಕೆಂಬ ತಮ್ಮ ಅಪೇಕ್ಷೆಯನ್ನು ತಿಳಿಸಿದರು.

ನಮ್ಮಾಳ್ವಾರರು ನಾಥಮುನಿಗಳ ಮೇಲೆ ಅತಿಯಾದ ಪ್ರೇಮವನ್ನು ಹೊಂದಿದವರಾಗಿ, ಆ ನಾಥಮುನಿಗಳಿಗೆ ದಿವ್ಯಜ್ಞಾನ ಚಕ್ಷುವನ್ನು ಅನುಗ್ರಹಿಸಿದರೆಂದು ನಂಬಲಾಗಿದೆ. ಅಲ್ಲದೆ ಅವರಿಗೆ ರಹಸ್ಯತ್ರಯವನ್ನು ನಾಲಾಯಿರ ದಿವ್ಯ ಪ್ರಬಂಧವನ್ನು ಪ್ರಸಾದಿಸಿದರು. ಇವುಗಳೊಂದಿಗೆ ಸಮಸ್ತ ದರ್ಶನಾರ್ಥಗಳನ್ನೂ, ಅಷ್ಟಾಂಗಯೋಗ ರ ಹ ಸ್ಯ ಗ ಳ ನ್ನೂ ಯೋ ಗಾ ಭ್ಯಾ ಸ ದ ಮುಖಾಂತರವೇ ಅನುಗ್ರಹಿಸಿ ಅಂತರ್ಧಾನರಾದರು ಎಂದು ನಂಬಲಾಗಿದೆ.

ವೇದಾಂತ ಸಂಪ್ರದಾಯಗಳಿಗೆ ಈ ಯುಗಾರಂಭದಲ್ಲಿ ಬ್ರಹ್ಮಾನಂದ್ಯಾದಿಗಳ ಹಿನ್ನೆಲೆಯಲ್ಲಿ ನಮ್ಮಾಳ್ವಾರರು ಪ್ರವರ್ತಕರಾದರು ಎಂದು ತಿಳಿಯಲಾಗಿದೆ. ಹೀಗೆ ನಮ್ಮಾಳ್ವಾರರು ನಾಥಮುನಿಗಳಿಗೆ ಆಚಾರ್ಯರಾದರು.

ಈ ರೀತಿಯಾಗಿ ನಮ್ಮಾಳ್ವಾರರಿಂದ ಸಮಸ್ತ ಜ್ಞಾನ ತತ್ತ್ವಸಾರಗಳನ್ನು ಹೊಂದಿದ ನಾಥಮುನಿಗಳು ಕೆಲವು ಕಾಲ ಆ ತಿರುನಗರಿಯಲ್ಲೇ ಇದ್ದರು. ಆಗ ಅಲ್ಲಿ ಭಕ್ತಾದಿಗಳಿಗೆ ಆ ದಿವ್ಯ ಪ್ರಬಂಧಗಳ ಪ್ರವಚನ ನಡೆಸಿದರು. ನಂತರ ತಮ್ಮ ಊರಿಗೆ ಹಿಂತಿರುಗಲು ಇಷ್ಟಪಟ್ಟು ಮಧ್ಯದಲ್ಲಿ ಎಲ್ಲಾ ದಿವ್ಯದೇಶಗಳನ್ನೂ ಸಂದರ್ಶಿಸಿ ಮಂಗಳಾಶಾಸನಗಳನ್ನು ಮಾಡಿ, ಅಲ್ಲಲ್ಲಿ ದಿವ್ಯ ಪ್ರಬಂಧದ ಬಗ್ಗೆ ಉಪನ್ಯಾಸಗಳನ್ನು ನೀಡಿ ಹಿಂತಿರುಗಿದರು

ಮನ್ನನಾರ್ ಸನ್ನಿಧಿಯಲ್ಲಿ ಅಮೃತ ಸಮಾನವಾದ ಆ ದಿವ್ಯ ಪ್ರಬಂಧಗಳ ವಾಚನ ವ್ಯಾಖ್ಯಾನಗಳನ್ನು ನೀಡಲು ತೀರ್ಮಾನಿಸಿದರು. ಅದರಂತೆ ತಮ್ಮ ಭಾಗಿನೇಯರಾದ ಕೀಳೈಯಕತ್ತಾಳ್ ಮತ್ತು ಮೇಲೆಯಕತ್ತಾಳ್ ಎನ್ನುವವರನ್ನು ಕರೆದು 'ಆಳ್ವಾರರು ನಮ್ಮ ಬಗ್ಗೆ ವಿಶೇಷ ಕಟಾಕ್ಷ ಬೀರಿ ಪ್ರೀತಿಯಿಂದ ನೀಡಿದ ಈ ದಿವ್ಯ ಪ್ರಬಂಧಗಳನ್ನು ರಾಗ ತಾಳ ಲಯ ಸಹಿತ ಹಾಡಬೇಕು' ಎಂದು ಆಜ್ಞಾಪಿಸಿದರು.

ಅದರಂತೆ ಅವರು ಈ ಪ್ರಬಂಧಗಳನ್ನು ಹಾಡುತ್ತಾ ಅದನ್ನು ಲೋಕ ಪ್ರಸಿದ್ಧಗೊಳಿಸಿದರು.

'ಸಂಸ್ಕೃತವೇದಕ್ಕೆ ವೇದವ್ಯಾಸರು ಹೇಗೋ ಹಾಗೆಯೇ ದ್ರಾವಿಡ ಬ್ರಹ್ಮಸಂಹಿತೆಗೆ ಶ್ರೀಮನ್ ನಾಥಮುನಿಗಳು' ಎಂದು ಪ್ರಸಿದ್ಧಿ ಪಡೆದರು.

ನಾಥಮುನಿಗಳಿಂದ ಪ್ರಣೀತವಾದ ದೇವಗಾನದ ಮುಖಾಂತರ ನಿರುಪಮಾನ ಪಾಂಡಿತ್ಯವನ್ನು ಪಡೆದರೆಂಬ ಅಂಶವನ್ನು ಗಂಗೈಕೊಂಡ ಚೋಳಪುರರಾಜ ಮತ್ತಿತರ ರಾಜ್ಯಗಳ ಮಹಾರಾಜರುಗಳು ಪರೀಕ್ಷಿಸಿ ಅವರ ನಿಜಪಾಂಡಿತ್ಯವನ್ನು ಅರಿತರು. ಅವರ ಪಾಂಡಿತ್ಯ ಕಲೆಗಳಿಗೆ ತಲೆತೂಗಿದರು. ಆದ್ದರಿಂದ ಅವರನ್ನು ಆಹ್ವಾನಿಸಿ ಸತ್ಕರಿಸಬೇಕೆಂದುಕೊಂಡರು. ಆದರೆ ಇಂತಹ ಹೊಗಳುಭಟ್ಟತನವನ್ನು ತೃಣೀಕರಿಸಿದ ನಾಥಮುನಿಗಳು ಅಂತಹ ಸತ್ಕಾರಗಳ ಒಗ್ಗೆ ಆಸೆ ಇಲ್ಲದವರಾಗಿ, ಮನ್ನನ್ನಾರಿನ ನಿತ್ಯಕೈಂಕರ್ಯದಲ್ಲೇ ಲೀನರಾಗಿ, ಅದನ್ನೇ ನಿಧಿಯೆಂದು ತಿಳಿದು ಪರವೈಕಾಂತಿಗಳಾಗಿ ಇದ್ದರು.

ಇವರ ಚರಣಾರವಿಂದಗಳನ್ನು ಆಶ್ರಯಿಸಿದವರು, ಎಂಟುಮಂದಿ ಶಿಷ್ಯರು. ಅವರುಗಳೆಂದರೆ ;

ಉಯ್ಯಕ್ಕೊಂಡಾರ್
ಕುರುಕೈಕಾವಲಪ್ಪನ್



ನಂಬಿಕರುಣಾಕರದಾಸರ್
ಏರುತಿರುವುಡೈಯಾರ್
ತಿರುಕ್ಕಣ್ಣಮಂಗೈಯಾಣ್ಡಾನ್
ವಾನಮಾಮಲೈದೇವಿಯಾಣ್ಡಾನ್
ಉರುಪ್ಪಟ್ಟೂರಾಚ್ಚಾನ್
ಶೋಕತ್ತೂರಾಳ್ವಾನ್

ಈ ಶಿಷ್ಯರುಗಳಿಗೆ ನಾಲಾಯಿರ ದಿವ್ಯ ಪ್ರಬಂಧವನ್ನು ಅಧ್ಯಯನ ಮಾಡಿಸಿದರು. ಅವರ ಮುಖಾಂತರ ನಾಲಾಯಿರವನ್ನು ಪ್ರಚಾರಪಡಿಸಿ, ದ್ರಾವಿಡವೇದವನ್ನು ಪುನರುಜ್ಜೀವನಗೊಳಿಸಿದರು. ನ್ಯಾಯತತ್ತ್ವ ಎನ್ನುವ ಪ್ರಬಂಧವನ್ನು ಇವರು ರಚಿಸಿದರೆಂದು ಹೇಳುತ್ತಾರೆ. ಆದರೆ ಅದು ಇದುವರೆಗೂ ದೊರೆಯದೆ ಇರುವುದರಿಂದ ಅದು ಲುಪ್ತವಾಗಿರಬಹುದು ಎಂದು ಹೇಳುತ್ತಾರೆ. ಆ ಗ್ರಂಥದ ಮಂಗಳ ಶ್ಲೋಕವೊಂದು ಮಾತ್ರವಷ್ಟೆ ಉಪಲಬ್ಧವಾಗಿದೆ.

ಯೋ ವೇತ್ತಿ ಯುಗಪತ್ಸರ್ವಂ
ಪ್ರತ್ಯಕ್ಷೇಣ ಸದಾ ಸ್ವತಃ
ತಂ ಪ್ರಣಮ್ಯ ಹರಿಂ ಶಾಸ್ತ್ರಂ
ನ್ಯಾಯತತ್ತ್ವಂ ಪ್ರಚಕ್ಷ್ಮಹೇ

ಎನ್ನುವುದರಿಂದ ಶ್ರೀ ವೇದಾಂತದೇಶಿಕರ ಕಾಲದವರೆಗೆ ಈ ಗ್ರಂಥವು ಉಪಯೋಗದಲ್ಲಿತ್ತು, ಪ್ರಚಾರದಲ್ಲಿತ್ತು ಎನ್ನುವುದಾತು 'ನ್ಯಾಯ ಸಿದ್ಧಾಂಜನ' ಇತ್ಯಾದಿ ಗ್ರಂಥಗಳಿಂದ ತಿಳಿದು ಬರುತ್ತದೆ.

'ಲೋಕೇವ ತೀರ್ಣಪರಮಾರ್ಥ ಸಮಗ್ರ ಭಕ್ತಿ ಯೋಗಾಯ ನಾಥಮುನಯೇ ಯಮಿನಾಂ ವರಾಯ'

— ಎಂದು ಆಳವಂದಾರ್‌ರಾದ ಯಾಮುನಾಚಾರ್ಯರೇ ತಿಳಿಸಿದಂತೆ ಇವರು ತಮ್ಮ ಯೋಗಾಭ್ಯಾಸದ ಪ್ರಭಾವದ ಮುಖಾಂತರ ಬಹಳ ವರ್ಷಗಳವರೆಗೆ ಜೀವಿಸಿದ್ದರು. ಕುರುಕೈಕಾಲವಪ್ಪನ್ ಎನ್ನುವ ತಮ್ಮ ಶಿಷ್ಯರಿಗೆ ಅಷ್ಟಾಂಗ ಯೋಗಕ್ರಮವನ್ನು ಅಭ್ಯಸಿಸಿದ್ದರು. ತಮ್ಮ ಪುತ್ರರಾದ ಈಶ್ವರ ಭಟ್ಟಾಳ್ವಾರನ್ನು ಅನುಗ್ರಹಿಸಿ

"ನಿಮಗೋರ್ವ ಪುತ್ರರು ಜನಿಸುವರು. ಅವರಿಗೆ 'ಯಮುನೈತ್ತುರೈವರ' ಎಂದೇ ಹೆಸರಿಡಿ", ಎಂದು ಆಜ್ಞಾಪಿಸಿದರು.

ಅಂತೆಯೇ ಉಯ್ಯಕ್ಕೊಂಡಾರ್‌ರವರು ಯಾಮುನಾಚಾರ್ಯರಿಗೆ ದರ್ಶನಾರ್ಥಗಳನ್ನು ಉಪದೇಶಿಸಬೇಕೆಂದೂ, ಕುರಕೈಕಾವಲಪ್ಪನವರು ಯೋಗ ರಹಸ್ಯಗಳನ್ನು ಉಪದೇಶಿಸಬೇಕೆಂದೂ ಆಜ್ಞಾಪಿಸಿ, ತಮ್ಮ ಯೋಗಾಭ್ಯಾಸ ಕ್ರಮವನ್ನು ಮುಂದುವರಿಸಿದರು.

"ಅಪ್ಪಾ ! ನಮ್ಮ ಮನೆಗೆ ಓರ್ವ ವಾನರನು, ಇಬ್ಬರು ಬೇಟೆಗಾರರು, ಓರ್ವ ಸ್ತ್ರೀಯೊಡನೆ ಬಂದು ನಾಥಮುನಿಗಳು ಎಲ್ಲಿ ಎಂದು ಕೇಳಿ, ಹುಡುಕಿ ಹೊರಟುಹೋದರು."

ಎಂದು ಒಮ್ಮೆ ಅವರಿಗೆ ಅವರ ಹೆಣ್ಣು ಮಕ್ಕಳು ಹೇಳಿದರು. ಇದನ್ನು ಆಲಿಸಿದ ನಾಥಮುನಿಗಳು

ಅಗ್ರತಃ ಪ್ರಯಂತಾ, ರಾಮಃ
ಸೀತಾ ಮಧ್ಯೇಸುಮಧ್ಯಮಾ ।
ಪೃಷ್ಠತಸ್ತು ಧನುಷ್ಪಾಣಿಃ
ಲಕ್ಷ್ಮಣೋನುಜಗಾಮಹ ॥

(25ನೇ ಪುಟ ನೋಡಿ)

# ಶ್ರೀಕಂಠೇಶ್ವರಸ್ವಾಮಿ

ನಿಸರ್ಗ ಸುಂದರವೂ ಎಡಬಲದಲ್ಲಿ ಕಪಿಲಾ ಕೌಂಡಿನೀ ನದಿಗಳೂ, ಜನರ ಮನವನ್ನು ಮುಗ್ಧಗೊಳಿಸುವ ಜಲದ ಕಲಕಲ ನಾದ, ಹಕ್ಕಿಗಳ ಚಿಲಿಪಿಲಿನಾದ, ದುಂಬಿಗಳ ಮಧುರ ಝೇಂಕಾರ ತುಂಬಿದ, ಮುನಿಗಳ ಮನಸೆಳೆವ ರಮ್ಯ ತಪೋವನ, ಪರಮೇಶ್ವರನು ರಜತಾದ್ರಿಯನ್ನು ತೊರೆದು ಗಿರಿಜೆಯೊಡನೆ ನೆಲೆಸಿದ ಪ್ರಿಯ ಪುಣ್ಯ ಧಾಮವೂ ಆಗಿರುವುದು ಗಳಪುರಿ ಅಥವಾ ನಂಜನಗೂಡು.

ಈ ಪುಣ್ಯಕ್ಷೇತ್ರವು ಮೈಸೂರಿನಿಂದ 14 ಮೈಲಿ ದೂರದಲ್ಲಿ ದಕ್ಷಿಣಭಾಗಕ್ಕೆ ಇದೆ. ಈ ಕ್ಷೇತ್ರದಲ್ಲಿ ಕಪಿಲಾನದಿಯು ಪಶ್ಚಿಮದಿಕ್ಕಿನಿಂದ ಪೂರ್ವ ದಿಕ್ಕಿಗೆ ಹರಿಯುತ್ತದೆ. ಈ ಕಪಿಲಾನದಿಯ ಮೇಲೆ ಕಟ್ಟಿರುವ ಸೇತುವೆಯ ಮೇಲೆ ಪ್ರಯಾಣ ಮಾಡುವಾಗ, ಪೂರ್ವದಿಕ್ಕಿಗೆ ದೃಷ್ಟಿ ಹಾಯಿಸಿದರೆ ಅಖಂಡವಾದ, ಸುಂದರವಾದ ಗೋಪುರವು ಯಾತ್ರಿಕರನ್ನು ಆಹ್ವಾನಿಸುವಂತೆ ತೋರುತ್ತದೆ.

ಒಂದೊಂದು ಕ್ಷೇತ್ರಕ್ಕೆ ಒಂದೊಂದು ಹೆಸರು ಇರುವುದಲ್ಲದೆ ಅದರ ಹಿಂದೆ ನಡೆದ ಕಥೆಯೂ ಇರುತ್ತದೆ. ಅದೇ ರೀತಿ ಈ ಕ್ಷೇತ್ರಕ್ಕೆ ನಂಜನಗೂಡು ಎಂಬ ಹೆಸರು ಹೇಗೆ ಬಂದಿತೆಂಬುದೊಂದು ಕಥೆಯಿದೆ.

ದೇವದಾನವರ ಸಮುದ್ರಮಥನ ಕಾಲದಲ್ಲಿ ಅಮೃತ, ಲಕ್ಷ್ಮಿ, ಉಚ್ಚೈಶ್ರವಸ್ಸು ಮುಂತಾದ್ದೆಲ್ಲವೂ ಹುಟ್ಟಿದುವಲ್ಲದೆ, ಕಾಲಕೂಟವೆಂಬ ವಿಷವೂ ಉತ್ಪತ್ತಿ ಆಯಿತು. ಪರಮೇಶ್ವರನು ಲೋಕೋದ್ಧಾರಕ್ಕಾಗಿ ಕಾಲಕೂಟ ವಿಷವನ್ನು ಕುಡಿದುದ್ದರಿಂದ ಶ್ರೀಕಂಠನೆನಿಸಿಕೊಂಡನು. ಆ ಸಮಯದಲ್ಲಿ ಒಂದು ತೊಟ್ಟು ವಿಷವು ಕೆಳಗೆ ಬೆಳೆದಿದ್ದ ದರ್ಭೆಯ ಮೇಲೆ ಬಿತ್ತು. ಅಮೃತವನ್ನು ಹಂಚುತ್ತಿದ್ದ, ಅತೀ ಸ್ಫುರದ್ರೂಪಿಯಾದ ಮೋಹಿನಿಯ ಸೌಂದರ್ಯಕ್ಕೆ ಮನಸೋತ ಕೇಶಿ ರಾಕ್ಷಸನು, ಮೋಹಿನಿಯನ್ನು ಮೋಹಿಸಲು ಬಂದಾಗ ರಾಕ್ಷಸನಿಗೆ ವಿಷವನ್ನು ಕೊಟ್ಟಳು. ಆ ವಿಷವು ಶ್ರೀಮನ್ನಾರಾಯಣನ ಹಸ್ತಸ್ಪರ್ಶದಾದ್ದರಿಂದ ಸಾಯದೇ ಮತ್ತಷ್ಟು ಪ್ರಬಲನಾದ. ಆ ವಿಷಸಂಬಂಧ ಇಲ್ಲಿ ನಿಂತದ್ದರಿಂದ ಈ ಸ್ಥಳಕ್ಕೆ ಗಳಪುರಿ ಅಥವಾ ನಂಜನಗೂಡು ಎಂಬ ಹೆಸರು ಬಂದಿತೆಂಬ ಪ್ರತೀತಿ.

ತ್ರಿಯಂಬಕ ರಾಕ್ಷಸನ ಮಗನಾದ ಕೇಶಿ ರಾಕ್ಷಸನು ಮಹಾಗರ್ವಿಯಾಗಿ ಮೆರೆಯುತ್ತ ದೇವಾದಿದೇವತೆಗಳನ್ನು, ಋಷಿಗಳನ್ನು ಬಹಳವಾಗಿ ಪೀಡಿಸುತ್ತಿದ್ದನು. ಅವರುಗಳು ಮಾಡುತ್ತಿದ್ದ ಯಜ್ಞಯಾಗಾದಿಗಳನ್ನು ಕೆಡಿಸುತ್ತಿದ್ದನು. ಆಗ ದೇವತೆಗಳೂ, ಋಷಿಗಳೂ ವಿಪರೀತ ಭಯಪಟ್ಟು ಜೀವದಾಸೆಯಿಂದ ಬ್ರಹ್ಮ, ವಿಷ್ಣುಗಳಲ್ಲಿ ಮೊರೆಯಿಟ್ಟು ತಮ್ಮ ಕಷ್ಟವನ್ನು ಹೇಳುತ್ತಾ ಅವನ ಸಂಹಾರ ಮಾಡಲು ಕೋರಿಕೊಳ್ಳುತ್ತಾರೆ. ಆಗ ವಿಷ್ಣು, 'ಆ ಪರಮೇಶ್ವರನ ಹೊರತು ಮಾತ್ತ್ಯಾರಿಗೂ ಅದು ಸಾಧ್ಯವಿಲ್ಲ, ನೀವುಗಳು ಆ ಪರಮೇಶ್ವರನನ್ನು ಮೊರೆ ಹೋಗಿ' ಎಂದು ಹೇಳುತ್ತಾ, ಬ್ರಹ್ಮ, ವಿಷ್ಣು ಆದಿಯಾಗಿ, ಕೈಲಾಸದಲ್ಲಿ ಪರಮೇಶ್ವರನನ್ನು ಭೇಟಿಯಾಗಿ, ಕೇಶಿರಾಕ್ಷಸನ ತೊಂದರೆ ಕೊಡುವುದನ್ನು ಹೇಳುತ್ತಾ 'ತಾವು ಅವನನ್ನು ಸಂಹಾರ ಮಾಡಿ, ಲೋಕೋದ್ಧಾರ ಮಾಡಬೇಕೆಂದು' ಕೇಳಿಕೊಳ್ಳುತ್ತಾರೆ ಆಗ ಶಿವನು ನೀವುಗಳು ಕಪಿಲಾ, ಕೌಂಡಿನೀ ಸಂಗಮದಲ್ಲಿ ಯಜ್ಞವನ್ನು ನೆರವೇರಿಸಿ ಮತ್ತೆ ಮುಂದಿನ ಕಾರ್ಯವನ್ನು ನಾನು ನೋಡಿಕೊಳ್ಳುತ್ತೇನೆ, ಅವನನ್ನು ಸಂಹಾರ ಮಾಡುತ್ತೇನೆ' ಎಂದು ಆಜ್ಞೆಮಾಡುತ್ತಾನೆ. ಒಂದು ಒಳ್ಳೆಯ ಮುಹೂರ್ತದಲ್ಲಿ ಯಜ್ಞ ಕಾರ್ಯವನ್ನು ಪ್ರಾರಂಭಿಸುತ್ತಾರೆ. ಯಜ್ಞಕಾರ್ಯವನ್ನು ತಿಳಿದ ಆ ದೈತ್ಯ ಕೇಶಿ ರಾಕ್ಷಸ ತನ್ನ ಸಹಚರರೊಡನೆ ಯಜ್ಞವನ್ನು ಕೆಡಿಸುವುದಕ್ಕೂ, ಹವಿಸ್ಸನ್ನು ತಿನ್ನುವುದಕ್ಕೂ ಬರುತ್ತಾನೆ. ಆಗ ಶಿವನು ಉಗ್ರರೂಪಿನಿಂದ ಅವನಲ್ಲಿ ಹೋರಾಡಿ ಯಜ್ಞಕುಂಡದಲ್ಲಿ ಹಾಕಿ ಸುಟ್ಟುಬಿಡುತ್ತಾನೆ. ಅಗ್ನಿಯಲ್ಲಿ ಧಹಿಸುತ್ತಿದ್ದಾಗ ಆ ದುಷ್ಟನ ದೇಹದಿಂದ ವಿಷವು ಹುಟ್ಟಿ ಸೋಂಕಿದ ಎಲ್ಲರನ್ನು ಕೊಲ್ಲತೊಡಗಿತು. ಶಿವನು, 'ನಾನು ಇದೆಂತಹ ಕಾರ್ಯವೆಸಗಿದೆ' ಎಂದು ಚಿಂತಿಸಿ ಆ ವಿಷವನ್ನು ಲೋಕೋಪಕಾರ ಮಾಡಲು ತಾನೇ ಸವಿದನು. ಇದರಿಂದಾಗಿ ಶಿವನಿಗೆ 'ನಂಜುಂಡ', ಅಥವಾ ಶ್ರೀಕಂಠ, ವಿಷವನ್ನು ಕುಡಿದು ಕಂಠ ನೀಲಿಬಣ್ಣಕ್ಕೆ ತಿರುಗಿದಾಗ 'ನೀಲಕಂಠ' ಎಂಬ ಹೆಸರುಗಳು ಬಂದವು.

ಈ ಕ್ಷೇತ್ರ ಅಂದರೆ ನಂಜನಗೂಡಿನ ಕ್ಷೇತ್ರದ ಮಹಿಮೆ ಅಪಾರವಾದುದು. ಸಮುದ್ರದಲ್ಲಿ ಜನಿಸಿದ ಲಕ್ಷ್ಮಿಯು, ಶ್ರೀಮನ್ ನಾರಾಯಣನನ್ನು ಮದುವೆಮಾಡಿಕೊಳ್ಳಬೇಕೆಂಬ ಹಂಬಲದಿಂದ, ಸಮುದ್ರರಾಜನ ಅಪ್ಪಣೆಯಂತೆ ಭೂಕೈಲಾಸ ಎಂದು ಹೆಸರು ಪಡೆದಿರುವ ಈ ಕ್ಷೇತ್ರದಲ್ಲಿ ತಪಸ್ಸು ಮಾಡಿದಳು. ಅವಳ ಭಕ್ತಿಗೆ ಈಶ್ವರನು ಪ್ರತ್ಯಕ್ಷನಾಗಿ ಆಕೆಯ ಇಷ್ಟಪ್ರಕಾರ ಶ್ರೀಮನ್ನಾರಾಯಣನೊಂದಿಗೆ ಲಕ್ಷ್ಮಿಯನ್ನು ಕೊಟ್ಟು ವೈಭವದಿಂದ ವಿವಾಹವನ್ನು ನೆರವೇರಿಸಿದನು. ಭಕ್ತಿಯಿಂದ ಪೂಜೆ ವ್ರತವನ್ನು ಮಾಡಿದವರಿಗೆ ಅವರ ಇಷ್ಟಾರ್ಥವನ್ನು ಈ ಪುಣ್ಯ ಕ್ಷೇತ್ರ ಪ್ರಸಾದಿಸುವುದು.

ಪರಶುರಾಮನು ತಂದೆಯ ಆಜ್ಞಾನುಸಾರವಾಗಿ ತಾಯಿಯಾದ ರೇಣುಕಾದೇವಿಯನ್ನು ಶಿರವನ್ನು ಛೇದಿಸಿ ಕೂಡಲೆ ತಂದೆಯ ವರದಿಂದ ತಾಯಿಯನ್ನು ಮತ್ತೆ ಬದುಕಿಸಿಕೊಂಡ. ಮಾತೃ ಹತ್ಯಾಪಾಪಪರಿಹಾರಕ್ಕಾಗಿ ತಂದೆಯ ಆಜ್ಞೆಯಂತೆ ಭೂ ಪ್ರದಕ್ಷಿಣೆ ಮಾಡುತ್ತ ಭೂಕೈಲಾಸವಾದ (ಗಳಪುರಿಗೆ) ನಂಜನಗೂಡಿಗೆ ಬಂದು ತಪಸ್ಸಿನಸ್ಥಳವನ್ನು ನಿರ್ಮಾಣ ಮಾಡುವುದಕ್ಕಾಗಿ ವಿಷಪೂರಿತ ಗಿಡವನ್ನು ತನ್ನ ಪರಶುವಿನಿಂದ ಕಡಿಯಲು ಹೋಗಿ, ಆ ಪೆಟ್ಟು ಸ್ವಾಮಿಯ ತಲೆಗೆ ಬಿದ್ದು ರಕ್ತಹರಿಯತೊಡಗಿತು. ಆಗ ಪರಶುರಾಮನು

(25-ನೆ ಪುಟ ನೋಡಿ)

ಶ್ರೀ ಬಿ. ಷಣ್ಮುಖಾಚಾರ್ಯ

# ದಾಸರೆಂದರೆ ಪುರಂದರದಾಸರಯ್ಯಾ

ದಾಸರ ನಕ್ಷತ್ರಮಾಲಿಕೆಯಲ್ಲಿ ಶ್ರೇಷ್ಠತರ ದಾಸರೆಂದು ಪ್ರಖ್ಯಾತರಾದ ಪುರಂದರ ದಾಸರ ಬಗ್ಗೆ ಅವರ ಅನೇಕ ಸಮಕಾಲೀನರೂ, ತದನಂತರದ ದಾಸರೂ ತಮ್ಮ ಭಕ್ತಿ ಗೌರವಗಳನ್ನು ಸೂಚಿಸಿದ್ದಾರೆ. 'ದಾಸರಾಯ, ದಾಸರಾಯ, ಪ್ರತಿವಾಸರದಲಿ ಶ್ರೀನಿವಾಸನ ತೋರೋ ದಯಾಸಾಂದ್ರಾ ಪುರಂದರ' ಎಂದು ಜಗನ್ನಾಥದಾಸರು ಪ್ರಾರ್ಥಿಸಿದರೆ, 'ಗುರು ಪುರಂದರರಾಯ ದುರಿತ ತಿಮಿರಕೆ ಸೂರ್ಯ' ಎಂದು ಮಧ್ವಪತಿ ವಿಠಲರು ಹೊಗಳಿದ್ದಾರೆ. ಆದರೆ ಇವೆಲ್ಲಕ್ಕಿಂತ ಹೆಚ್ಚಿನ ಮನ್ನಣೆ ಪುರಂದರ ದಾಸರಿಗೆ ದೊರೆತದ್ದು, ಸ್ವತಃ ಅವರ ಗುರುಗಳಾಗಿದ್ದ ವ್ಯಾಸರಾಯರಿಂದ. ಚಾರಿತ್ರ್ಯದ ಮೂಲಕ, ಸಾಹಿತ್ಯ ಸೇವೆಯ ಮೂಲಕ ಹರಿಶ್ರದ್ಧೆಯ ಮೂಲಕ ಯಾರಾದರೂ ಪೂತಾತ್ಮರಿದ್ದರೆ ಪುರಂದರರು ಮಾತ್ರ ಎಂದು ವ್ಯಾಸರಾಯರು ಉದ್ಘೋಷಿಸಿದ್ದಾರೆ.

ವ್ಯಾಸರಾಯರು ಪುರಂದರರನ್ನು ಪೂತಾತ್ಮರೆಂದು ಹೊಗಳಿದ್ದಾರೆ, ಅಲ್ಲದೆ ಹಾಗೆ ಹೊಗಳಲು ಕಾರಣವಾದ ಅವರಲ್ಲಿದ್ದ ಅಸಾಧಾರಣ ಗುಣಗಳನ್ನು ವರ್ಣಿಸಿದ್ದಾರೆ. ಪುರಂದರರು ಅನ್ಯರ ಮನೆಯಲ್ಲಿ ಕಾಡಿ ಬೇಡಿ ಬಳಲಿಸಿ ಬದುಕಲಿಲ್ಲ. ಡಾಂಭಿಕತನದ ಜನರ ಮುಂದೆ ಮಾತ್ರ ಹರಿಸ್ಮರಣೆ ಹೇಳದೆ, ನಿಜವಾಗಿ ಆಗಮಗಳನ್ನೆಲ್ಲ ಅರಿತಿದ್ದ ಶಾಸ್ತ್ರಜ್ಞರು. ಜನಸಾಮಾನ್ಯರನ್ನು ಮೆಚ್ಚಿಸಬೇಕೆಂಬ ಆಸೆ ಅವರದಲ್ಲ. ಎಲ್ಲ ನೀತಿಯನ್ನು ಅರಿತು, ಗೀತನರ್ತನದಿಂದ ಪರಮಾತ್ಮನನ್ನು ಪೂಜಿಸಿದ ಪೂತಾತ್ಮರು, ಎಂತಲೇ 'ದಾಸರೆಂದರೆ ಪುರಂದರದಾಸರಯ್ಯಾ'.

ಡಾ॥ ರಾ. ಯ. ಧಾರವಾಡಕರ

ಈ ಹೇಳಿಕೆ ಅನೇಕ ವಿಧದಲ್ಲಿ ಪುರಂದರ ದಾಸರಿಗೆ ಸಮರ್ಪಕವಾಗಿ ಅನ್ವಯಿಸುತ್ತದೆ. ಹರಿಸರ್ವೋತ್ತಮನೆಂಬ ಅದಮ್ಯ ಶ್ರದ್ಧೆ, ಸ್ವಂತ ಜೀವನದ ಔನ್ನತ್ಯ, ಗ್ರಂಥಬಾಹುಳ್ಯ ಗ್ರಂಥಸತ್ವ, ಸಮಾಜ ವಿಮರ್ಶೆ, ಜೀವನ ದೃಷ್ಟಿ, ಲೋಕಬೋಧೆ, ಸಾಹಿತ್ಯ ಗುಣ —ಇವೆಲ್ಲ ಈ ಹೇಳಿಕೆಯ ಯಥಾರ್ಥತೆಯನ್ನು ಎತ್ತಿ ತೋರಿಸುತ್ತವೆ.

ಹರಿಸರ್ವೋತ್ತಮನೆಂಬುದನ್ನು ಪುರಂದರದಾಸರು ಕೈ ಎತ್ತಿ ಸಾರಿದ್ದಾರೆ, 'ಹೊಡಿ ನಗಾರಿ ಮ್ಯಾಲೆ ಕೈಯ್ಯ, ಢಣ ಢಣ ಹೊಡಿ ನಗಾರಿ ಮ್ಯಾಲೆ ಕೈಯ್ಯ.........ಭಜಿಸ ರಥ ಬಿಡಿಸಿ ಪೊರೆವ ಜಗದೊಡೆಯನೆ ಪರಮನೆಂದು' ಎಂದು ನಗಾರಿ ಬಾರಿಸಿದ್ದಾರೆ.

ಪುರಂದರದಾಸರ ಜೀವನವೂ ಅಷ್ಟೇ ಉನ್ನತವಾದದ್ದು. ದಾಸರ ಜೀವನದ ಆಕರಗಳೆಂದರೆ – ಅವರು ತಮ್ಮ ಕೀರ್ತನೆಗಳಲ್ಲಿ ತಮ್ಮ ಬಗ್ಗೆ ಹೇಳಿಕೊಂಡ ಮಾತುಗಳು, ಅವರ ಬಗ್ಗೆ ಅವರ ಸಮಕಾಲೀನರು ತದನಂತರದ ದಾಸರುಗಳು ಹೇಳಿದ ಮಾತುಗಳು,

---

ದಾಸರೆಂದರೆ ಪುರಂದರ ದಾಸರಯ್ಯಾ ॥ ಪ ॥

ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ
ದಾಸರೆಂದರೆ ಪುರಂದರದಾಸರಯ್ಯಾ ॥ ಅ. ಪ ॥

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಲಸೀ ಮಾಲೆ ಧರಿಸಿ
ಬ್ಯಾಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ
ಕಾಸುಗಳಿಸುವ ಪುರುಷ ಹರಿದಾಸನೆ? ೧

ಡಂಭಕದಿ ಹರಿಸ್ಮರಣೆ ಮಾಡಿ ಜನರಾ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವ ಪಿತನ ಆಗಮಗಳರಿಯದೆ
ತಂಬೂರಿ ಮೀಟುವವ ಹರಿದಾಸನೆ ? ೨

ಪಾತಕನ ತೆರನಂತೆ ಪದಗಳನು ತಾ ಬೊಗಳಿ
ಕೊಟಜನರಾ ಮನವ ಸಂತೋಷ ಪಡಿಸಿ
ಗೂಟನಾಮವನಿಟ್ಟು ಕೊಟ್ಟರಿಯೆ ತಾನೆನುತ
ಕಾಟಕೊಟಕನ ಮಾಡಿದವ ಹರಿದಾಸನೆ? ೩

ನೀತಿಯೆಲ್ಲವನರಿತು ನಿಗಮ ವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರ ದಾಸರಿವರಯ್ಯಾ ೪

—ವ್ಯಾಸರಾಯರು

# ಓ ಧರ್ಮದೇವತೆಯೇ !

ಓ ಧರ್ಮ ದೇವತೆಯೆ ನಿನ್ನ ಅಡಿಗಳ ಮೇಲೆ
ಹೂಗಳ ರಾಶಿ ರಾಶಿ
ಮುಗುಳುತಿಹ ಶಿಶುಗಳ ತೆರದಿ
ಬೀಳುತಿಹ ಮುಂಜಾವಿನಾ ಹಿಮದ ತುಂತುಗಳು
ಅದೋ ಬೆಳಗಿನಲ್ಲಿ ಕಾಣುತಿದೆ
ದೈವದೆತ್ತರಕೆ ಬೆಳೆದ ದಿಕ್ಸೂಚಿ
ಆರದೋ ಕರೆಯ ಕೇಳಿ ನಡೆದ ಕಾಲನ ತೆರದಿ
ದಿಗಂತಗಳನೆಣಿಸಿ ನಡೆವ ಬೀಭತ್ಸತನದಲ್ಲಿ
ನೂಪುರದ ಇಂಪಾದ ಶಬ್ದ ಚೈತನ್ಯದಲಿ
ಕೇಳಬರುತಿದೆ ದೇವತೆಯೆ ನಿನ್ನ ಇಂಚರದ ಸೊಬಗು
ಪಳೆಯುಳಿಕೆಯ ತೆರದಿ ಅಲ್ಲವೇ ಅಲ್ಲಮ್ಮ
ಹೇ ಧರ್ಮಮಾತೆ! ದಯಾಸಿಂಧು! ಸುಪ್ರೀತೆ
ಮಾತು ಮಾತುಗಳಲ್ಲಿ ವಿನಯ ಸರಳತೆ ತುಂಬಿ
ಜಡಕೆ ಚೈತನ್ಯ ನೀಡಿ ನಡೆಸುವ ಧರ್ಮವೇ
ಬಾ, ಎದ್ದೇಳು ಕೈಯ ಹಿಡಿದೆನ್ನ ನಡೆಸಮ್ಮ
ಧೀಧಿತಿಯ ನೀಡಿ ಆತ್ಮಚೇತನಕೆಂದು ಜ್ಯೋತಿ ನೀನಾಗಮ್ಮ
ಶ್ರೀ ರಾಮಕೃಷ್ಣರ ದೇವಿ ನೀನಾದೆ ಎಲೆ ತಾಯಿ ಶಾರದೆಯೆ
ಹಿಡಿದೆತ್ತು ಪತನದಿಂದೆಲ್ಲ ಮಾನವರ
ಚೇತನಗಳಮ್ಮ ತಾಯೆ ಧರ್ಮದೇವತೆಯೆ !

ಬಾರಮ್ಮ ನೊಂದ ಜನಮನಕೆ

**—ಕುಮುದಪ್ರಿಯ**

ಪುರಂದರದಾಸ ಮಹಾತ್ಮ್ಯಂ ಎಂಬ ಐದು ಅಧ್ಯಾಯದ ಸಂಸ್ಕೃತ ಚರಿತ್ರೆ, ಸಂಸ್ಕೃತದಲ್ಲಿ ಇಂದಿರೇಶ ಕೃತವಾದ 82 ನುಡಿಗಳ ಸ್ತೋತ್ರ, ತೆಲುಗಿನಲ್ಲಿ ಚಿನ್ನನ್ನ ಬರೆದ 'ಅನ್ನಮಾಂಕ ಚರಿತಮು' ಹಾಗೂ ಮರಾಠಿಯಲ್ಲಿ ಮಹಿಪತಿ ಕವಿ ಬರೆದ 'ಭಕ್ತವಿಜಯ' ಕೃತಿಗಳು. ಅವರ ಜೀವನದ ಬಗ್ಗೆ ಇಲ್ಲಿ ಚರ್ಚೆ ಅನಾವಶ್ಯಕ. ಅವರ ಕಾಲದಲ್ಲಿ ಇಂದಿನ ಮಹಾರಾಷ್ಟ್ರದ ಅನೇಕ ಭಾಗಗಳು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜನರಿಂದ ಕೂಡಿದ್ದಿತು ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಅಂತೆಯೇ ದಂಡಿಯ ದಶಕುಮಾರ ಚರಿತೆಯನ್ನು ಭಾಷಾಂತರಿಸಿದ ಚಾವುಂಡರಸನು ಪಂಡರಿಗೆಯ ಪುಂಡಲೀಕನ ವರ್ಣನೆಯನ್ನು ಮಾಡುತ್ತಾನೆ. ಹಾಗಾಗಿ ಇವೆಲ್ಲ ಮಾತುಗಳನ್ನೂ ಒಟ್ಟಾರೆ ತೆಗೆದುಕೊಂಡು ದಾಸರ ಜೀವನವನ್ನು ಗಮನಿಸಬೇಕು. ಹಾಗೆ ಮಾಡಿದಾಗ 'ಆದದ್ದೆಲ್ಲಾ ಒಳಿತೇ ಆಯಿತು', 'ಎತ್ತ ಪೋದನಮ್ಮಾ ವಿಪ್ರನ ಎಲ್ಲಿ ಹುಡುಕಲಮ್ಮ', 'ಮುಯ್ಯಕ್ಕೆ ಮುಯ್ಯ ತೀರಿತು', 'ಇಲ್ಲಿ ನಮ್ಮ ಶಾಸ್ತ್ರ ಮಾರುವುದಿಲ್ಲ', 'ಗಿಳಿಯು ಪಂಜರದೊಳಿಲ್ಲ', ಎಂದು ಮೊದಲಾಗುವ ಕೀರ್ತನೆಗಳಲ್ಲಿ ಬರುವ ವೈಯಕ್ತಿಕ ಅಂಶಗಳು ಪುರಂದರದಾಸರ ಜೀವನವನ್ನೇ ಸಾರುವುವೆಂದು ನಾನು ಭಾವಿಸುತ್ತೇನೆ. ಲಕ್ಷಾಧಿಪತಿಯಾಗಿದ್ದ ಈ ಜಿಪುಣ, ಜೈನತತ್ತ್ವದಲ್ಲಿ ಆಸನ್ನಭವ್ಯರ ಬಗ್ಗೆ ಹೇಳುವಂತೆ, ಯಾವುದೋ ಪರಮಾತ್ಮನ ಕೃಪೆಯ ಮೂಲಕ ಆ ಸಿರಿ ಸಂಪತ್ತನ್ನೆಲ್ಲ ತೊರೆದು, ವಿಜಯನಗರಕ್ಕೆ ಬಂದು ವ್ಯಾಸರಾಯರ ಕೈಂಕರ್ಯವನ್ನು ಸ್ವೀಕರಿಸಿ, ಅಪರೋಕ್ಷ ಜ್ಞಾನಿಯಾಗುತ್ತಾನೆ.

ಕವಿ ಯಾರೇ ಇರಲಿ, ಅವರ ಜೀವನದ ಘಟನೆಗಳೇನೇ ಇರಲಿ, ಅವರು ಸೃಷ್ಟಿಸಿದ ಕೃತಿಗಳಲ್ಲಿ ಅವರ ಜೀವನ ದೃಷ್ಟಿ ಯಾವರೀತಿ ಮೂಡಿ ಬಂದಿದೆಯೋ ಅದು ಇತರ ಸಾಧಕರ ಜೀವನಕ್ಕೆ ಯಾವರೀತಿ ಬಾಳಬಟ್ಟೆಯ ಪರಮಾಗಮವಾಗುತ್ತದೆ ಎಂಬುದು ಮುಖ್ಯ.

ಈ ದೃಷ್ಟಿಯಿಂದ ನೋಡಿದರೆ ದಾಸರಲ್ಲಿ ಪರಮಾತ್ಮನ ಬಗ್ಗೆ ತೀವ್ರವಾದ ಆರ್ತ

ಭಾವವಿದ್ದಿತು 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಎಂಬ ಅನನ್ಯ ಶರಣಭಾವನೆ. ದಾಸರ ಅನೇಕ ಕೀರ್ತನೆಗಳಲ್ಲಿ ಈ ಆರ್ತಭಾವ ಪ್ರಕಟವಾಗಿದೆ.

ದಯಮಾಡೊ ದಯಮಾಡೊ ರಂಗ
ದಯಮಾಡೊ ನಿನ್ನ ದಾಸ ನಾನೆಂದು
ಹಲವು ಕಾಲದಿಂದ ನಿನ್ನ ಹಂಬಲನೆನಗೆ
ಒಲಿದು ಪಾಲಿಸಬೇಕು ವಾರಿಜನಾಭ

ಹಾಗಯೇ;

ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ
ಗೋವಿಂದ ನೀನಲ್ಲದೆ ಇಹಪರವಿಲ್ಲಾ
ಪರರ ಬೇಡಿಪ್ಪಂತೆ ಗತಿಯಾಯಿತಲ್ಲಾ
ನರರ ನುತಿಸಿ ನಾಲಿಗೆ ಬರಡಾಯಿತಲ್ಲಾ

–ಹೀಗಾಗಿ ಆ ಭಗವಂತನನ್ನು ಬೇಡುತ್ತಾರೆ;

ಕಂಡು ಕಂಡು ನೀಯೆನ್ನ ಕೈಯ
ಬಿಡುವರೆ
ಪುಂಡರೀಕಾಕ್ಷ ಪುರುಷೋತ್ತಮ ಹರೇ
ಬಂಧುಗಳು ಎನಗಿಲ್ಲ ಬದುಕಿನಲಿ
ಸುಖವಿಲ್ಲ
ನಿಂದೆಯಲಿ ನೊಂದೆನೈ ನೀರಜಾಕ್ಷ

–ಹೃದಯದ ಈ ಆರ್ತತೆ ಅವರನ್ನು ಭಕ್ತಿಯ ಆವೇಶಕ್ಕೆ ಕೊಂಡೊಯ್ಯುತ್ತದೆ. 'ಎಲ್ಲಿ ಹರಿಕಥಾ ಪ್ರಸಂಗವೋ ಅಲ್ಲಿ ಗಂಗಾ ಯಮುನಾ ಗೋದಾವರಿ ಸರಸ್ವತೀ ಸಿಂಧು ಎಲ್ಲ ತೀರ್ಥವು ಬಂದು ಎಣೆಯಾಗಿ ನಿಲ್ಲುವುವು, ವಲ್ಲಭ ಶ್ರೀಪುರಂದರ ವಿಠಲ ಮೆಚ್ಚುವನು', 'ಜಯಜಯಹರಿಯೆಂಬುದೆ ಸುದಿನವು, ಜಯಹರಿಯೆಂಬುದೆ ತಾರಾಬಲವು, ಜಯ ಹರಿಯೆಂಬುದೆ ವಿದ್ಯಾಬಲವು'–ಈ ಭಕ್ತಿಯ ಆವೇಶ ಅವರನ್ನು ಕೊಚ್ಚಿ ಕೊಂಡು ಹೋಗುತ್ತದೆ. 'ಅಮಲಾ ಭಕ್ತಿಶ್ಚ ತತ್ಸಾಧನಮ್!' 'ಹರಿಯೇ ಸರ್ವೋತ್ತಮ' ಅವನನ್ನು ನೋಡಿ ಕಣ್ಣು ದಣಿಯಬೇಕು, ಹಾಡಿ ನಾಲಗೆ ದಣಿಯಬೇಕು 'ಡಂಗುರವ ಸಾರಿರೋ ಹರಿಯ ಡಿಂಗರಿಗರೆಲ್ಲರು ಭೂಮಂಡಲಕ್ಕೆ ಪಾಂಡುರಂಗ ವಿಠಲನೇ ಪರದೈವವೆಂದು'. ಒಡಲ ಜಾಗಟೆಮಾಡಿ ನುಡಿವ ನಾಲಗೆಯ ಪಿಡಿದು ಬಿಡದೆ ಢಣ ಢಣರೆಂದು ಬಡಿದು 'ಚಪ್ಪಳಿಕ್ಕುತ ಡಂಗುರವ ಸಾರಿರೋ'– ಹೀಗೆ ಉತ್ಸಾಹದಿಂದ ಕುಣಿಲಿರಿದಾಗ ಪರಮಾತ್ಮ ಪ್ರತ್ಯಕ್ಷವಾಗದೆ ಏನು ಮಾಡಿಯಾನು! 'ದೇವಬಂದ ನಮ್ಮ ಸ್ವಾಮಿ ಬಂದನೋ, ದೇವರ ದೇವ ಶಿಖಾಮಣಿ ಬಂದನೋ ರಂಗ ಶಯನ ಬಂದ ಗರುಡಗಮನ ಬಂದ ನರಗೊಲಿದವ ಬಂದ ನಾರಾಯಣ ಬಂದ,' – ಈ ದರ್ಶನವನ್ನು ಕಂಡು ಪುರಂದರದಾಸರ ಕಣ್ಣು ನೀರು ತುಂಬುತ್ತದೆ. ಪರಮಾತ್ಮನ ಸಾಕ್ಷಾತ್ಕಾರ ಪಡೆದ ಅವರ ಉಸಿರು ಬಿಟ್ಟೋ ಬಿಡದೆ ಪರಮಾತ್ಮನ ನಾಮಸ್ಮರಣೆ ಮಾತ್ರ ಮಾಡುತ್ತದೆ. 'ಮನ್ಮನಾಭವ ಮದ್ ಭಕ್ತೋ ಮದ್ಯಾಜೀ ಮಾಂ ನಮಸ್ಕುರು,' ಎಂದೂ 'ಯತ್ಕರೋಷಿ, ಯದಶ್ನಾಸಿ, ಯಜ್ಜುಹೋಷಿ ದದಾಸಿ ಯತ್' ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಂ'– ಎಂದೂ ಹೇಳಿದ ಭಗವಂತನ ವಾಣಿ ಅವರಿಗೆ ಬರಿಯ ವಚನಗಳ್ಳವಲ್ಲ; ಅವರ ಜೀವನದ ಅನುಭೂತಿ. ಅದಕ್ಕಾಗಿಯೇ ಪರಮಾತ್ಮ ಅವರ ಮುಂದು ಹಿಂದು ಸುತ್ತುಮುತ್ತಲೂ ಇದ್ದಾನೆ. 'ಕಂಡೆನಾ ಕನಸಿನಲಿ ಗೋವಿಂದನ, ಕನಕ ರತ್ನದ ಮಣಿಮಯ ನಂದನ ಕಂದ ಮುಕುಂದನ ಚರಣವ, ಅಂದುಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ ಬಂದು ಕಾಳಿಂಗನ ಹೆಡೆಯೇರಿ ಧಿಂ ಧಿಮಿ ಧಿಮಿಕೆಂದು ತಾಳಗತಿಗ ಳಿಂದಾನಂದದಿ ಕುಣಿವ ಮುಕುಂದನ ಚರಣವ ಕಂಡೆನಾ ಕನಸಿನಲಿ'. ಪರಮಾತ್ಮನ ಪಾದ ಅವರ ಮನೆಯಂಗಳದಲ್ಲಿ ನಕ್ಷತ್ರ ಮೂಡಿದ ಹಾಗೆ ಮಾಡಿದೆ. 'ತಂಗಿ ನೋಡ ನಮ್ಮಂಗಳದೊಳು ಪಾಂಡುರಂಗ ಮೆಲ್ಲಡಿಯಿಟ್ಟು ಹೋದ. ನಮ್ಮ ಗಂಗೆ ಜನಿಸಿ ಮೂಲೋಕಕ್ಕೆ ಮುಕುತಿಯ ತಾರಂಗ ವೊಲಿದ, ಪಾದ ಮಂಗಳ ಸಾಸಿರದಳದ ಸರ್ವೋತ್ತಮ ರಂಗವಲ್ಲಿಯನಿಕ್ಕಿದಂತೆ ಶೋಭಿಸುತಿದೆ, ತಂಗಿ ನಮ್ಮಂಗಳದೊಳು ಪಾಂಡುರಂಗ ಮೆಲ್ಲಡಿಯಿಟ್ಟು ಪೋದ'.

ಇಂತಹ ಭಗವತ್ ಸಾಕ್ಷಾತ್ಕಾರ ಸುಲಭವಾಗಿ ದೊರಕುವುದಿಲ್ಲ. ಇದಕ್ಕೆ ಸಮ್ಯಕ್ ದರ್ಶನ ಬೇಕು, ಸಮ್ಯಕ್ ಚಾರಿತ್ರ್ಯಬೇಕು, ಜೀವನದ ಮಹತಿ, ನಿಜವಾದ ಅರ್ಥವನ್ನು ಅಂತಿರಬೇಕು. ಮನುಷ್ಯ ಅನಾವಶ್ಯಕವಾದ ವಿಷಯಗಳಲ್ಲಿ ತನ್ನ ವೇಳೆ ಹಾಗೂ ಉತ್ಸಾಹಗಳನ್ನು ಹಾಳುಗಾಡಿಕೊಳ್ಳಬಾರದು.

ಈ ಜೀವನದ ಅನುಭವಗಳು ಸತ್ಯಪೂರ್ಣವಾಗಿದ್ದರೂ ಅವೆಲ್ಲ ಅಶಾಶ್ವತ ಎಂಬುದನ್ನು ಸಾಧಕ ಅರಿತುಕೊಳ್ಳಬೇಕು. ಶಾಶ್ವತ ವಾದುದರತ್ತ ಮಾತ್ರವೇ ಮನ ಮಾಡಬೇಕು. ತೆರಣಿಯ ಹುಳು ತನ್ನ ಸ್ನೇಹದಲ್ಲಿ ತಾನೇ ಸುತ್ತುವಂತೆ, ಈ ಸಂಸಾರದ ಜಂಜಾಟದಲ್ಲಿ ತೊಳಲಬಾರದು. 'ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ ಆನೆ ಕುದುರೆ ಒಂಟೆ ಲೊಳಲೊಟ್ಟೆ, ಬಲುಸೇನೆ ಭಂಡಾರವು ಲೊಳಲೊಟ್ಟೆ, ಮಾಸಿಯರ ಸಂಗ ಲೊಳಲೊಟ್ಟೆ..................ಪುರಂದರ ವಿಠಲನ ಭಂಟನಾಗದವ ಲೊಳಲೊಟ್ಟೆ'. 'ಆರೂ ಸಂಗಡ ಬಾಹೋರಿಲ್ಲ, ನಾರಾಯಣನ ನಾಮ ನೆರೆ ಬಾಹೋದಲ್ಲದೆ ............ ಮತ್ತೆ ಪ್ರಾಣನು ತನುವ ಬಿಟ್ಟು ಹೋಗುವಾಗ ಎತ್ತಿವನ ಹೊರಗೊಯ್ದು ಹಾಕಿರೆಂಬರು



ಎತ್ತಿದಾ ಕಸಕಿಂತ ಕಡೆಯಾಯಿತೀ ದೇಹ'. ಬರೀ ಔಷಧದಿಂದ ಮಾತ್ರ ಗುಣವಾಗುತ್ತಿದ್ದರೆ ಔಷಧ ತುಂಬಿದ ಬಾವಲಿಯೇ ಚಿರಾಯುವಾಗಬೇಕಿತ್ತು. ಆದೂ ಭಂಗುರ ಅಶಾಶ್ವತ. 'ಮೃತಂ ಶರೀರಂ ಉತ್ಸೃಜ್ಯ ಕಾಷ್ಠ ಲೋಷ್ಟ ಸಮಂ ಕ್ಷಿತೌ. ವಿಮುಖಾಃ ಬಾಂಧವಾಃ, ಯಾಂತಿ ಧರ್ಮಸ್ತಮನು ಗಚ್ಛತಿ'. ವ್ಯಕ್ತಿಯ ಜೊತೆಗೆ ಏನಾದರೂ ಹೋಗುವುದಾದರೆ ಅದು ಅವನ ಧರ್ಮ ಮಾತ್ರ. ನಾರಿ, ಧಾರುಣಿ, ಬಲುಧನದ ಸಿರಿ – ಯಾವುದೂ ಬರುವುದಿಲ್ಲ. 'ಮುನ್ನ ಶತಕೋಟಿ ರಾಯರುಗಳಾಳಿದ ನೆಲವ ತನ್ನದೆಂದೆನುತ ಶಾಸನವ ಬರೆಸಿ ಬಿನ್ನಣವ ಮನೆ ಕಟ್ಟಿ, ಕೋಟೆಕೊತ್ತಳವಿಕ್ಕಿ ಚೆನ್ನಿಗನ ಅಸುವಳಿಯೆ ಹೊರಗೆ ಹಾಕುವರು. ಕವಿ ಕುಮಾರವ್ಯಾಸ ಹೇಳಿದ ಹಾಗೆ 'ಧರಣೀ ನಾರಿ ಯಾರ ಮೆಚ್ಚಿದಳಾರ ಸಂಗಡ ಉರಿಯ ಹಾಯಿದಳು ?' 'ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ.'

ಹೋಗಲಿ, ಸತ್ತಮೇಲೆ ಹೇಗೋ ಏನೋ ಬದುಕಿದ್ದಾಗಲಾದರೂ ಸುಖಿಯಾಗಿದ್ದಾನೆಯೇ ? ಚಿಂತೆಗಳ ಕಂಟಕ ಮಾಲೆ ಅವನ ಕೊರಳನ್ನು ಆವರಿಸಿದೆ. ರಾಟಳದ ಗುಂಡಿಗೆ ಹಾಗೆ ಸುಖ ದುಃಖ ಮೇಲೆ ಕೆಳಗೆ ತೂಗುತ್ತಲೇ ಇವೆ. ಅದರಲ್ಲಿಯೂ ಸುಖಕ್ಕಿಂತ ದುಃಖವೇ ಹೆಚ್ಚು. ಅನುಗಾಲವೂ ಚಿಂತೆ ಜೀವಕ್ಕೆ. 'ತನ್ನ ಮನವು ಶ್ರೀರಂಗನೊಳ್ ಮೆಚ್ಚುವ ತನಕ ಸತಿಯಿದ್ದರು ಚಿಂತೆ ಸತಿಯಿಲ್ಲದಿರೆ ಚಿಂತೆ ಪೃಥಿವಿಯೊಳಗೆ ಸತಿ ಕಡು ಚೆಲುವೆಯಿದ್ದರೆ ಮೇರೆಮಿತಿಯಿಲ್ಲದ ಮೋಹದ ಚಿಂತೆ'. ಭಾರ್ಯಾರೂಪವತೀ ಶತ್ರುಃ. ಇಷ್ಟೆಲ್ಲ ಇದ್ದರೂ 'ಮಕ್ಕಳಿಲ್ಲದ ಚಿಂತೆ ಮಕ್ಕಳಾದರೂ ಚಿಂತೆ......ಪೊಡವಿಯೊಳಗೆ ನಮ್ಮ ಪುರಂದರವಿಠಲನ ಬಿಡದೆ ಧ್ಯಾನಿಸುವನಕ ಚಿಂತೆ'.

ಆದ್ದರಿಂದ ನಾವು ಯಾವುದಕ್ಕೂ ಹೆಮ್ಮೆ ಪಡಬಾರದು. 'ಮುನ್ನೊಮ್ಮೆ ರಾವಣನು ಜನಕನ ಸಭೆಯಲ್ಲಿ ತನ್ನಳವನರಿಯದೆ ಧನುವನ್ನೆತ್ತಲು ಉನ್ನತದ ಧನು ಎದೆಯ ಮೇಲೆ ಬೀಳಲು ಬನ್ನಬಟ್ಟುದ ನೀವು ಕೇಳಿಬಲ್ಲಿರಾ?' ಹಾಗೆಯೇ ಕೌರವ, ಸತ್ಯಭಾಮೆಯರು ತಮ್ಮ ಅಹಂಕಾರದಿಂದಾಗಿ ಬನ್ನಬಟ್ಟುದನ್ನು ಕೇಳಿದ್ದೇವೆ.

ಇವೆಲ್ಲ ರೋಗಗಳಿಗೂ ಒಂದೇ ಒಂದು ರಾಮಬಾಣವೆಂದರೆ ಅದು ಭಗವಂತನ ನಾಮಸ್ಮರಣೆ. ಶುದ್ಧ ಮನಸ್ಸಿನಿಂದ ಶುದ್ಧ ಚಾರಿತ್ರ್ಯದಿಂದ ಆ ಪರಮಾತ್ಮನನ್ನು ನಂಬಿದರೆ "ನಂಬಿ ಕೆಟ್ಟವರಿಲ್ಲ ನಂಬದೆ ಕೆಟ್ಟರೆ ಕೆಡಲಿ". ಆದಕ್ಕಾಗಿ ಈ ಎಲ್ಲ ದುರಿತಾಪಹಾರಕನಾದ ಶ್ರೀಕೃಷ್ಣ ಪರಮಾತ್ಮನನ್ನು ನೆನೆಯಬೇಕು. 'ಕೃಷ್ಣಾ ಎನಬಾರದೇ, ಕೃಷ್ಣನ ನೆನೆದರೆ ಕಷ್ಟ ಒಂದಷ್ಟಿಲ್ಲ, ಕೃಷ್ಣ ಎನಬಾರದೇ? ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣಾ ಎನಬಾರದೇ".

ಭಕ್ತಿ ಮಾಗಿಯ ಬಿಸಿಲಿದ್ದ ಹಾಗೆ, ಮೊದಲೇನೋ ಅಂಗಕ್ಕೆ ಸುಖ ಎನಿಸಿದರೂ ಕೊನೆಕೊನೆಗೆ ಕೂರ್ದಸಿಯಾಗುತ್ತದೆ. ಹೋಗುತ್ತ ಕುಯ್ಯುದು ಬರುತ್ತ ಕುಯ್ಯುದು. ಅದಕ್ಕಾಗಿ ಮನಷ್ಯ ತನ್ನ ಮಾನಾಪಮಾನಗಳ ಬಗ್ಗೆ ಚಿಂತಿಸಲಾಗದು. ಅಷ್ಟೇ ಅಲ್ಲ ಮಾನ ಅಭಿಮಾನಗಳಿಂದ ಉಬ್ಬುವುದಕ್ಕಿಂತ ಅಪಮಾನವನ್ನು ಸಹಿಸುವುದೇ ಲೇಸು. ಸಂಕಟ ಬಂದಾಗ ವೆಂಕಟರಮಣ ಸದಾ ನಮ್ಮ ನಾಲಗೆಯ ಮೇಲಿರುತ್ತಾನೆ. ಆ ಸಂಕಟ ಪರಿಹಾರವಾದ ಕೂಡಲೇ ನಾನು, ನನ್ನದು, ನನ್ನಿಂದ ಎಂಬವಿ ಭಕ್ತಿ ಪ್ರತ್ಯಯಗಳು ಅಹಂಕಾರಕ್ಕೆ ಹತ್ತಿಕೊಳ್ಳುತ್ತವೆ. ಮನುಷ್ಯ ಸರಿಯಾದ ಮಾರ್ಗದಲ್ಲಿ ಸಾಗಬೇಕಾದರೆ ಅಪಮಾನವೇ ಒಳಿತು. 'ಅಪಮಾನವಾದರೆ ಒಳಿತು ಅಪರೂಪ ಹರಿನಾಮ ಜಪಿಸುವ ಮನುಜಗೆ' ಮಾನದಿಂದ ಅಭಿ – ಮಾನ ಹುಟ್ಟುವುದು, ಮಾನದಿಂ ತಪ ಹಾನಿಯಾಗುವುದು, ಮಾನಿ ದುರ್ಯೋಧನನಿಗೆ ಹಾನಿಯಾಯಿತು. ಅನುಮಾನವಿಲ್ಲ, ಮಾನಾಪಮಾನ ಸಮಾನನಿಗೆ ಅಪಮಾನದಿಂದ ತಪ ವೃದ್ಧಿಯಾಗುವುದು ಅಪಮಾನದಿಂದ ಪುಣ್ಯ ಸಫಲವಾಗುವುದು, ಸಂಸ್ಕೃತದಲ್ಲಿ ಹೇಳಿರುವುದುಂಟು. 'ವಿಪದಃ ಸಂತು ನಃ ಶಶ್ವತ್. ಯತ್ರ ಸಂಕೀರ್ತ್ಯತೇ ಹರಿಃ' ಹರಿಸಂಕೀರ್ತನೆ ನಡೆಯುವಲ್ಲೆಲ್ಲ ನನಗೆ ಮಾನಕ್ಕಿಂತ ಅಪಮಾನವೇ ಇರಲಿ. ಅಂದಾಗಲೇ ನನ್ನ ಮನಸ್ಸು ಅವನ ಚರಣ ಕಮಲಗಳಲ್ಲಿ ಲೀನವಾಗುತ್ತದೆ.

–(ಸಶೇಷ)

# ಗುರುಗೋವಿಂದ ವಿಠಲದಾಸರು

**ಶ್ರೀ ಜಯಸಿಂಹ**

ಹರಿದಾಸಶ್ರೇಷ್ಠ ಪುರಂದರದಾಸರ ಮೇಲ್ಪಂಕ್ತಿಯನ್ನು ಅನುಸರಿಸಿ ಅವರ ಪಾವನ ಪರಂಪರೆಯನ್ನು ಬೆಳಗಿದ ಗುರು ಗೋವಿಂದ ವಿಠಲದಾಸರು ಈ ಶತಮಾನದ ಧೀಮಂತ ಹರಿದಾಸರಲ್ಲಿ ಅಗ್ರಗಣ್ಯರು. ಸುಮಾರು ನಾಲ್ಕು ದಶಕಗಳಷ್ಟು ಕಾಲ ದಾಸ ದೀವಿಗೆಯನ್ನು ಎತ್ತಿ ಹಿಡಿದು ಕನ್ನಡದ ಹರಿದಾಸ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದ ಕೀರ್ತಿ ಅವರದು.

ಕೃಶವಾದ ನೀಳಕಾಯ, ಬಿಳುಪು ಬಣ್ಣ, ಬಾಗಿದ ಬೆನ್ನು, ಹೂವು ಅರಳಿದ ಹಾಗೆ ಮುಗುಳುನಗೆ.

ನಡೆ ಗಂಭೀರ, ನುಡಿ ನೇರ, ಸ್ಫಟಿಕದ ಶಲಾಕದ ಹಾಗೆ ಸುಸ್ಪಷ್ಟ. ಆದರೆ ಮನಸ್ಸು ಅಷ್ಟೇ ಮೃದು. ಹಸುಗೂಸಿನ ಸ್ವಭಾವ, ಪರರ ನೋವಿನ ಕಾವು ಒಂದಿಷ್ಟು ತಗುಲಿದರೂ ಸಾಕು ದ್ರವಿಸಿ ಹೋಗುವ ಕೋಮಲ ಅಂತಃಕರಣ.

ಹತ್ತು ಉಪನಿಷತ್ತುಗಳನ್ನು ಸರಳ ರೀತಿಯಲ್ಲಿ ಕನ್ನಡಿಸಿ, ಹತ್ತು ಹಲವು ಸದ್ಗ್ರಂಥಗಳನ್ನು ರಚಿಸಿ, ಸಹಸ್ರಾರು ಕೀರ್ತನೆಗಳನ್ನು ಬರೆದು ತಮ್ಮ 89 ನೇ ವರ್ಷದಲ್ಲಿ ಹರಿಪುರಕ್ಕೆ ತೆರಳಿದ ಗುರು ಗೋವಿಂದ ವಿಠಲದಾಸರದು ಅದ್ಭುತ ಚೇತನ. ಅವರ ಬದುಕು ಕನ್ನಡ ನಾಡಿನ ಮುಂದಿನ ಪೀಳಿಗೆಗೆ ದಾರಿದೀಪ. ಅವರ ಸಾಧನೆ ಎಂಥಹವರಿಗೂ ಒಂದು ಆದರ್ಶ.

ಚಿಕ್ಕಮಗಳೂರಿನಲ್ಲಿ ಜನಿಸಿದ ಗುರು ಗೋವಿಂದ ವಿಠಲದಾಸರ ಜನ್ಮನಾಮ: ಎಂ. ಆರ್. ಗೋವಿಂದರಾವ್. ಮೈಸೂರು ಅವರ ಪೂರ್ವಜರ ಊರು. ತಾಯಿ ಲಕ್ಷ್ಮೀಬಾಯಿ. ತಂದೆ ರಘುನಾಥರಾವ್. ನಾಲ್ಕನೇ ವಯಸ್ಸಿಗೆ ತಂದೆಯ ಮರಣ, ಬಯಸಿ ಬಂದ ಬಡತನ; ಅಪ್ಪಿ ಹಿಡಿದ ಬವಣೆ. ಕಷ್ಟದ ಸಂಸಾರ. ತಾಯಿಯ ಆಸರೆಯಲ್ಲಿ ಹುಡುಗ ಗೋವಿಂದನ ವಿಕಾಸ. ಬಂಧುಗಳ ಮನೆಯಲ್ಲಿ ವಾಸಿಸುತ್ತಾ ಅವರಿವರ ಮನೆಗಳಲ್ಲಿ ಕೆಲಸ ಮಾಡುತ್ತಾ ತಾಯಿಯಿಂದ ಮಗನಿಗೆ ಎಸ್. ಎಸ್. ಎಲ್. ಸಿ. ವರೆಗೂ ಶಿಕ್ಷಣ. ಆ ನಂತರ "ಬೆಂಗಳೂರಿನಲ್ಲಿ ಸಬ್‌ಓವರ್ಸಿಯರ್ ಹುದ್ದೆಯ ತರಬೇತಿ. ತರಬೇತಿಯ ನಂತರ ಲೋಕೋಪಯೋಗಿ ಇಲಾಖೆಯಲ್ಲಿ ಹುಡುಗನಿಗೆ ಹುದ್ದೆ 'ಸಬ್-ಓವರ್ಸಿಯರ್' ಆಗಿ ನೇಮಕ. ತಾಯಿಯ ಕಷ್ಟ ಕೋಟಲೆಗಳಿಗೆ ಕೊನೆ. ನೆಮ್ಮದಿಯ ವಾತಾವರಣ.

ಗುಣದಲ್ಲಿ ಗೋವಿಂದ ಅಪ್ಪಟ ಚಿನ್ನ, ಕಷ್ಟ ಸಹಿಷ್ಣುತೆ, ತಾಳ್ಮೆ, ಪ್ರಾಮಾಣಿಕತೆ, ದೈವ ಭಕ್ತಿ, ಸಾತ್ತ್ವಿಕ ನಿಷ್ಠೆ–ಎಲ್ಲದರಲ್ಲೂ ತಾಯಿಯದೇ ಪ್ರತಿರೂಪ. ಮತ್ತೊಬ್ಬರ ಮನಸ್ಸಿಗೆ ಕಿಂಚಿತ್ತು ನೋವುಂಟಾದರೂ ಚಡಪಡಿಸುವ ಸಾಧು ಹೃದಯ.

ಸಬ್–ಓವರ್ಸಿಯರ್ ಆಗಿ ಊರಿನಿಂದ ಊರಿಗೆ ವರ್ಗವಾಗುತ್ತಾ ಅಲೆಯುತ್ತಿರುವ ಮಗನಿಗೆ ಆದಷ್ಟು ಬೇಗ ಮದುವೆ ಮಾಡಬೇಕೆಂದು ತಾಯಿಯ ಆಕಾಂಕ್ಷೆ. ತಾಯಿಯ ಕೋರಿಕೆಯನ್ನು ಗೋವಿಂದ ತಳ್ಳಿ ಹಾಕಲಿಲ್ಲ. ಸತ್ಕುಲ ಪ್ರಸೂತೆಯಾದ 'ತುಳಸಮ್ಮ' ಎಂಬ ಕನ್ಯಾಮಣಿಯ ಕೈಹಿಡಿದು ಗೃಹಸ್ಥಾಶ್ರಮ ಸ್ವೀಕರಿಸಿದ.

ತುಳಸಮ್ಮ ಸಾಧ್ವೀ ಶಿರೋಮಣಿ. ಸದ್ಗುಣ ಸಂಪನ್ನೆ, ಪತಿಯನ್ನೂ ಮೀರಿಸುವ ದೈವ ಭಕ್ತಿ ಆಕೆಯದು. ಮನೆಗೆ ಬರುವ ಅತಿಥಿ ಅಭ್ಯಾಗತರ ಸೇವೆ ಮಾಡುವುದರಲ್ಲಿ ಎತ್ತಿದ ಕೈ. ಪತಿಯಲ್ಲೇ ಶ್ರೀಪತಿಯನ್ನು ಕಾಣುವ ಅಸಾಧಾರಣ ವ್ಯಕ್ತಿತ್ವ.

ಗೋವಿಂದರಾಯರದು ಮೊದಲೇ ಧಾರ್ಮಿಕ ಪ್ರವೃತ್ತಿ. ಜೊತೆಗೆ ಕೈಹಿಡಿದ ಧರ್ಮಪತ್ನಿಯೂ ಧಾರ್ಮಿಕ ಶ್ರದ್ಧೆಯವಳಾಗಿದ್ದ ಮೇಲೆ ಕೇಳಬೇಕೆ. ಹಾಲಿಗೆ ಸಕ್ಕರೆ ಬೆರೆತಂತೆ ಆಯಿತು ರಾಯರ ಜೀವನ. ವೈಷ್ಣವನಾಗಿ ಹುಟ್ಟಿದ ಮೇಲೆ ಸರ್ವಜ್ಞಾಚಾರ್ಯರ ಸರ್ವಮೂಲ ಗ್ರಂಥಗಳನ್ನು ಅಭ್ಯಾಸ ಮಾಡಬೇಕೆಂದು ಸಂಕಲ್ಪಿಸಿ ಮೊಳಕಾಲ್ಮೂರು ಚಿಕ್ಕೇರಹಳ್ಳಿ ಮಧ್ವೇಶದಾಸರಲ್ಲಿ ಶಾಂತಿಪಾಠ, (1938) ನಂತರ ಮೈಸೂರಿನಲ್ಲಿ ನಂದಗುಡಿ ನರಸಿಂಹಮೂರ್ತಿರಾಯರಲ್ಲಿ ಸೂತ್ರ ಭಾಷ್ಯಗಳ ಅಧ್ಯಯನ.

1940 ರಲ್ಲಿ ಗೋವಿಂದರಾಯರಿಗೆ ಹಾಸನಕ್ಕೆ ವರ್ಗವಾದಾಗ ತಂದೆವೆಂಕಟೇಶ ವಿಠಲಾಂಕಿತರಾದ ಆರ್. ರಾಮಚಂದ್ರರಾಯರ ಪರಿಚಯ. ಅವರಿಂದ ಹರಿದಾಸ ದೀಕ್ಷೆಗೆ ಸ್ಫೂರ್ತಿ. ಅಪರೋಕ್ಷ ಜ್ಞಾನಿಗಳಾದ ವಿಜಯದಾಸರ ಪಾವನ ಪರಂಪರೆಯಲ್ಲಿ ಬಂದಿರುವ ದೇವರಾಯನ ದುರ್ಗದ ಪರಮಪ್ರಿಯ ಸುಬ್ಬರಾಯದಾಸರಲ್ಲಿ ಉಪದೇಶ ಪಡೆಯಲು ನಿರ್ಧಾರ, ಶಿಷ್ಯನ ಮನೋಧಾರ್ಢ್ಯವನ್ನು ಕಂಡು ಗುರುಗಳಿಗೆ ಮೆಚ್ಚಿಗೆ, ಆಂತರಿಕ ಸಿರಿವಂತರಾದ ಗೋವಿಂದರಾಯರಿಗೆ ಸುಬ್ಬರಾಯದಾಸರಿಂದ "ಗುರು ಗೋವಿಂದ ವಿಠಲ" ಎಂಬ ಅಂಕಿತದೊಂದಿಗೆ ದಾಸ ದೀಕ್ಷೆ.

ಅಂಕಿತೋಪದೇಶವನ್ನು ಪಡೆದ ನಂತರ ದಾಸರ ಬದುಕಿನ ದಿಕ್ಕೇ ಬದಲಾಯಿತು. "ನಾಹಂ ಕರ್ತಾ ಹರಿಃ ಕರ್ತಾ" ಎಂಬ ನುಡಿಯನ್ನು ಪ್ರತಿ ಉಸಿರಿನೊಂದಿಗೆ ಹೇಳಿಕೊಳ್ಳುತ್ತಾ ಸಾಧನೆಗಾಗಿ ತಮ್ಮ ಶರೀರವನ್ನು ಮೀಸಲಿಟ್ಟರು. ಹರಿವಾಯು ಗುರುಗಳ ಸೇವೆಗೆ ಕಂಕಣಬದ್ಧರಾದರು.

1950 ರಲ್ಲಿ ತಾಯಿಯವರಾದ ಲಕ್ಷ್ಮೀಬಾಯಿ ತೀರಿಕೊಂಡಾಗ ದಾಸರದು ಐದು ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳ ತುಂಬಿದ ಕುಟುಂಬ. ಸರ್ಕಾರಿ ಕೆಲಸದಿಂದ ನಿವೃತ್ತಿಯೂ ಆಯಿತು. ತೊಟ್ಟು ಕಳಚಿದ ಹಣ್ಣಿನಂತೆ ದಾಸರು ವೈರಾಗ್ಯಮೂರ್ತಿಗಳಾದರು. 1952 ರಲ್ಲಿ ಪತ್ನಿ

ಸಮೇತ ಬದರೀಕ್ಷೇತ್ರಯಾತ್ರೆ ಮಾಡಿ ಬಂದರು. ನಂತರ ಮೈಸೂರಿನಲ್ಲಿ ನೆಲೆಸಿದರು. ತಮ್ಮ ಗುರುಗಳಾದ ಪರಮಪ್ರಿಯ ಸುಬ್ಬರಾಯದಾಸರ ಚರಿತ್ರೆಯನ್ನು ರಮಾಕಾಂತ ವಿಠಲದಾಸರೊಂದಿಗೆ ಸೇರಿ ಬರೆದರು. ಅಂದಿನಿಂದ ಪ್ರಾರಂಭವಾಯಿತು ದಾಸರ ಜ್ಞಾನಕಾರ್ಯ. "ಗುರುಕೃಪಾ ಗ್ರಂಥಮಾಲೆ" ಯನ್ನು ಪ್ರಾರಂಭಿಸಿ ತಮ್ಮ ಪರಮ ಗುರುಗಳಾದ ಮುದ್ದು ಮೋಹನ ದಾಸರ ಚರಿತ್ರೆಯನ್ನು ಬರೆದರು. ಒಂದಾದ ಮೇಲೆ ಒಂದರಂತೆ ಸಂಸ್ಕೃತದಲ್ಲಿರುವ ಹತ್ತು ಉಪನಿಷತ್ತುಗಳನ್ನೂ ಪದ್ಯರೂಪದಲ್ಲಿ ಕನ್ನಡಕ್ಕಿಳಿಸಿ ಸಾಧಕರಿಗೆ ಉಪಕರಿಸಿದರು. "ಶ್ರೀವಾದಿರಾಜರ ಋಜುತ್ವ ಪ್ರಕಾಶಿಕೆ"ಯನ್ನು ರಚಿಸಿ ಭಾವೀ ಸಮೀರರಾದ ವಾದಿರಾಜ ಗುರುವರ್ಯರ ಅನುಗ್ರಹಕ್ಕೆ ಪಾತ್ರರಾದರು. "ಶ್ರೀ ಹರಿಭಕ್ತ ವಿಜಯ" ಎಂಬ ಹೆಸರಿನಿಂದ ಹಲವಾರು ಹರಿದಾಸ ಶ್ರೇಷ್ಠರ ಜೀವನ ದರ್ಶನ ಮಾಡಿಸಿದರು.

ಪ್ರತಿ ವರ್ಷವೂ ತಪ್ಪದೆ ಪುರಂದರದಾಸರ ಆರಾಧನೆಯನ್ನು ಅನೇಕ ಕಡೆಗಳಲ್ಲಿ ನಡೆಸಿ "ಬೃಹತಿ ಸಹಸ್ರ ಹೋಮ, ಸ್ವಪ್ನ ವೃಂದಾವನಾಖ್ಯಾನ ಹೋಮ" ಮುಂತಾದ ಅಪೂರ್ವ ಹೋಮಗಳನ್ನು ನಡೆಸಿದರು. ಮೈಸೂರಿನಲ್ಲಿರುವ ತಮ್ಮ ಸ್ವಗೃಹವನ್ನು ಪಾಂಡುರಂಗ ವಿಠಲ ಹಾಗೂ ಪ್ರಾಣದೇವರ ದೇವಸ್ಥಾನವಾಗಿ ಪರಿವರ್ತಿಸಿ ಶ್ರೀಜಗನ್ನಾಥ ದಾಸರ ಕರಾರ್ಚಿತವಾದ ಹಯಗ್ರೀವ ಮುಂತಾದ ದೇವತಾಮೂರ್ತಿಗಳನ್ನು ತಮ್ಮ ಜೀವನದ ಕಡೆಯವರೆಗೂ ಪೂಜಿಸಿದರು. ಹಲವಾರು ಸುಜೀವಿಗಳಿಗೆ ಅಂಕಿತೋಪದೇಶ ನೀಡಿ ಸಾಧನ ಮಾರ್ಗ ತೋರಿದರು. ದಾಸ ಸಾಹಿತ್ಯ ಪ್ರಚಾರಕ್ಕಾಗಿ "ಹರಿದಾಸ ದೀಪಿಕಾ" ಎಂಬ ಮಾಸಪತ್ರಿಕೆಯನ್ನು ಅವ್ಯಾಹತವಾಗಿ ನಡೆಸಿದರು. ದಾಸಸಾಮ್ರಾಜ್ಯದ ಸೇವೆಯಲ್ಲಿ ತಮ್ಮನ್ನು ತಾವು ಶ್ರೀಗಂಧದಂತೆ ತೇಯ್ದುಕೊಳ್ಳುತ್ತಿದ್ದ ದಾಸರು, ದಿನಾಂಕ 10–1–1983 ರಂದು ಮಾರ್ಗಶಿರ ದ್ವಾದಶಿಯಂದು ಅನಂತಪುರದಲ್ಲಿರುವ ತಮ್ಮ ಮಗನ ಮನೆಯಲ್ಲಿ ಇಹಲೋಕ ತೊರೆದು ಕಣ್ಮರೆಯಾದರು.

ದಾಸರ ಜೀವನದಲ್ಲಿ ಮತ್ತೊಂದು ಮುಖ್ಯ ಸಂಗತಿಯೆಂದರೆ ತಿರುಪತಿಯ ಶ್ರೀ ವ್ಯಾಸರಾಯರ ಮಠದಲ್ಲಿ ಪುರಂದರದಾಸ ಆರಾಧನೆಯನ್ನು ಮಾಡಿ ಆ ಮೂಲಕ ತಿರುಮಲೆ ತಿರುಪತಿ ದೇವಸ್ಥಾನಗಳು 'ದಾಸಸಾಹಿತ್ಯ ಪ್ರಾಜೆಕ್ಟ್' ಅನ್ನು ಹರಿದಾಸರ ಕೃತಿಗಳ ಪ್ರಚಾರಕ್ಕಾಗಿ ಉಂಟುಮಾಡುವಂತೆ ಪ್ರೇರಣೆ ನೀಡಿದ್ದು. ಈ ದಾಸ ಸಾಹಿತ್ಯ ಪ್ರಾಜೆಕ್ಟ್ ಈಗ ಶ್ರೀ ಅಪ್ಪಣ್ಣಾಚಾರ್ಯರ ನೇತೃತ್ವದಲ್ಲಿ ಯಶಸ್ವಿಯಾಗಿ ಕೆಲಸ ನಿರ್ವಹಿಸುತ್ತಿದೆ.

ದಾಸರು ತೋರಿದ ಬೆಳಕು ಎಲ್ಲರನ್ನೂ ಮುನ್ನಡೆಸುವ ದಾರಿ ದೀಪವಾಗಲಿ.



# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಮೈಲಾರ ಹುಣ್ಣಿಮೆ

ಕಲ್ಲು ರೂಪಾಂತರಗೊಂಡು, ಕಲೆಯಾಯಿತ್ತು,
ಮಣ್ಣು ರೂಪಾಂತರಗೊಂಡು
ಚಿನ್ನವಾಯಿತ್ತು,
ಬೀಜ ರೂಪಾಂತರಗೊಂಡು ವೃಕ್ಷವಾಯಿತ್ತು,
ನೀರು ರೂಪಾಂತರಗೊಂಡು ಮುತ್ತಾಯಿತ್ತು,
ಭಕ್ತಿ ರೂಪಾಂತರಗೊಂಡು ಐಕ್ಯಸ್ಥಳದ
ಅರಿವಿನೊಳಗಣ ಅರಿವ ಮೂಡಿಸಿತ್ತು
ನೋಡಾ!
ಎನ್ನ ವರಗುರು ಶಿವಕುಮಾರ ಪ್ರಭುವೆ.

ಮಾಲತೇಶ ಮಹಾತ್ಮೆ ಅದ್ಭುತ; ಹಾಗೂ ಕುತೂಹಲಕಾರಿ. ಅಲ್ಲದೆ ಸವಾಡನೀಯ. ಈ ಮಾಲತೇಶ ಮಹಾತ್ಮೆಯು ದೇವಗಣ ಹಾಗೂ ರಾಕ್ಷಸಗಣಗಳ ನಡುವಿನ ಘನಘೋರ ಯುದ್ಧದ ಹಿನ್ನೆಲೆಯಲ್ಲಿ ಪರಮಾತ್ಮನು ಶಿಷ್ಟರ ರಕ್ಷಕ ಹಾಗೂ ದುಷ್ಟರ ಸಂಹಾರಕ ಎಂಬ ದಿವ್ಯ ಸಂದೇಶವನ್ನು ಸಾರುತ್ತದೆ. ಸೂತ ಪೌರಾಣಿಕರು ದಿವ್ಯ ಪುರಾಣದಲ್ಲಿ ಹೇಳಿದ ಕಥೆ ಮಾಲತೇಶನ ಮಹಿಮೆಯನ್ನೇ ಸಾರಿ ಸಾರಿ ಹೇಳುತ್ತದೆ. ದೇವರ ಗುಡ್ಡದ ಮೈಲಾರದಲ್ಲಿಯ ಜಾತ್ರೆಯ ಪ್ರಯುಕ್ತ ಅದನ್ನಿಲ್ಲಿ ಸಂಕ್ಷಿಪ್ತವಾಗಿ ವಿವರಿಸುವುದು ಸಮಯೋಚಿತ.

ಆದಿಕಾಲದಲ್ಲಿ ಮಣಿಚೂಲ ಪ್ರದೇಶವು ಪರ್ವತಮಯವಾಗಿತ್ತು. ಪರಮಾತ್ಮನ ಅನುಗ್ರಹದ ಮೇರೆಗೆ ಅಲ್ಲಿ ಲೋಕಕಲ್ಯಾಣಾರ್ಥ ಅನೇಕ ಋಷಿಮುನಿಗಳು, ಸಾಧುಸಂತರು ತಪಸ್ಸು ಮಾಡುತ್ತಿದ್ದರು. ತಪಸ್ಸಿಗೆ ಅನುಕೂಲವಾದ ಎಲ್ಲ ಸೌಕರ್ಯಗಳು ಅಲ್ಲಿ ಇದ್ದವು. ನಿಸರ್ಗ ಸೌಂದರ್ಯದ ಪ್ರಶಾಂತ ವಾತಾವರಣ.

ಪ್ರತಿನಿತ್ಯವೂ ವೇದಾಂಗಗಳು, ಸ್ಮೃತಿಗಳ ಹಾಗೂ ಪುರಾಣ – ಪುಣ್ಯ ಕಥೆಗಳ ಪ್ರವಚನಗಳಿಂದ ಆ ಪ್ರದೇಶ ಪರಮಾನಂದದ ಬೀಡಾಗಿತ್ತು. ಆದರೆ ಕ್ರೂರ ರಾಕ್ಷಸರು ಕಠೋರ ತಪಸ್ಸು ಮಾಡಿ ಪರಮಾತ್ಮನನ್ನು ಮೆಚ್ಚಿಸಿ ವರಗಳನ್ನು ಪಡೆದು ಋಷಿಮುನಿಗಳನ್ನು ನಿತ್ಯವೂ ಹಿಂಸಿಸತೊಡಗಿದರು.

ರಾಕ್ಷಸಗಣದಲ್ಲಿ ಮಲ್ಲಾಸುರ ಮತ್ತು ಮಣಿಕಾಸುರ ಈ ಇಬ್ಬರು ಸಹೋದರರು ಭಾರೀ ತಪಸ್ಸು ಮಾಡಿ ಪರಮಾತ್ಮನಿಂದ ತಮಗೆ ಬೇಕಾದ ವರಗಳನ್ನು ಪಡೆದು ಗರ್ವಿಷ್ಟರಾಗಿ ಸಾತ್ವಿಕರಾದ ತಪಸ್ವಿಗಳನ್ನು ಪೀಡಿಸಲಾರಂಭಿಸಿದರು. ಇದರಿಂದ ಋಷಿಮುನಿಗಳು ಚಿಂತೆಗೊಳಗಾಗಿ ಬ್ರಹ್ಮ ಮಾನಸಪುತ್ರನಾದ ಸನತ್ಕುಮಾರನನ್ನು ಶಾಂತಚಿತ್ತರಾಗಿ ಪ್ರಾರ್ಥಿಸಿದರು. ಸನತ್ಕುಮಾರ ಪ್ರತ್ಯಕ್ಷನಾಗಿ ಅನುಗ್ರಹಿಸಿದ.

"ಚಿಂತಿಸಬೇಡಿ, ನಿಮ್ಮ ಪತ್ನೀ ಪುತ್ರರನ್ನು ಸುರಕ್ಷಿತ ಸ್ಥಳಗಳಲ್ಲಿಟ್ಟು, ನೀವು ದೇವೇಂದ್ರನ ಬಳಿಗೆ ಹೋಗಿ ನಿಮ್ಮ ಕಷ್ಟವನ್ನು ತಿಳಿಸಿ. ನಿಮ್ಮ ಪುಣ್ಯ ನಿಮಗೆ ರಕ್ಷಾಕವಚವಾಗಿದೆ" ಎಂದು ಸನತ್ಕುಮಾರ ಅದೃಶ್ಯನಾದ.

ಋಷಿಮುನಿಗಳು ಹಾಗೆಯೇ ಮಾಡಿ ದೇವೇಂದ್ರನ ಅಮರಾವತಿಗೆ ಹೊರಟರು. ಅವರು ಪರಮಾತ್ಮನ ಜಪ, ನಾಮಸ್ಮರಣೆ ಮಾಡುತ್ತ ಆಕಾಶ ಮಾರ್ಗವಾಗಿ ಅಮರಾವತಿಗೆ ಬಂದಾಗ ದೇವೇಂದ್ರನು ತನ್ನ ಬಂಗಾರದ ಪೀಠದಿಂದ ಎದ್ದುಬಂದು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ನಿಮ್ಮ ದರ್ಶನದಿಂದ ನಾನು ಧನ್ಯನಾದೆ ಎಂದೂ ದೇವೇಂದ್ರ ಹೇಳಿದ ವಿನಯದಿಂದ.

"ದೇವೇಂದ್ರ, ನಾವು ಮಣಿಚೂಲ ಪರ್ವತದಲ್ಲಿ ಪರಮಾತ್ಮನ ಜಪ-ತಪ ಮಾಡುತ್ತ ಹಾಯಾಗಿದ್ದೆವು ಆದರೆ ಮಣಿ ಮತ್ತು ಮಲ್ಲರೆಂಬ ಇಬ್ಬರು ಕ್ರೂರ ರಾಕ್ಷಸರು ನಮ್ಮ ತಪೋಭೂಮಿಯಲ್ಲಿ ಪವಿತ್ರ ಪರ್ಣಶಾಲೆ, ಹೋಮ ಕುಂಡ, ಯಜ್ಞಪೀಠ ಹಾಗೂ ಗೋಶಾಲೆ ಎಲ್ಲವನ್ನೂ ಧ್ವಂಸ ಮಾಡಿದ್ದಾರೆ. ನಮ್ಮನ್ನು ನಮ್ಮ ಹೆಂಡರು ಮಕ್ಕಳನ್ನು ಹೊಡೆದು ಪೀಡಿಸಿದ್ದಾರೆ ಗೋಹತ್ಯೆ ಮಾಡಿದ್ದಾರೆ" ಎಂದು ದುಃಖತಪ್ತವಾದ ಮುನಿಗಳು ತಮ್ಮ ಸಂಕಷ್ಟಗಳನ್ನು ತೋಡಿಕೊಂಡರು.

ದೇವೇಂದ್ರ ಹೇಳಿದ: 'ಮುನಿಗಳೆ, ತಿಳಿಯಿತು. ಆದರೆ ಆ ಕ್ರೂರ ರಾಕ್ಷಸರನ್ನು ಕೊಲ್ಲುವುದು ಸುಲಭವಲ್ಲ. ಪರಮಾತ್ಮನ ಹೊರತು ಬೇರೆ ಯಾರಿಂದಲೂ ಅವರನ್ನು ಕೊಲ್ಲುವುದು ಸಾಧ್ಯವಿಲ್ಲ. ಆದ್ದರಿಂದ ನೀವು ಪರಮಾತ್ಮನಲ್ಲಿ ಹೋಗಿ ನಿಮ್ಮ ಕಷ್ಟ ತಿಳಿಸಿ'.

ಮುನಿಗಳು ದೇವೇಂದ್ರನ ಸಲಹೆಗೆ ಒಪ್ಪಿ ಪರಮಾತ್ಮನನ್ನು ಭೆಟ್ಟಿಯಾಗಲು ವಿಷ್ಣುತೀರಕ್ಕೆ ಪ್ರಯಾಣ ಬೆಳೆಸಿದರು. ಅವರು ಪರಮಾತ್ಮನಲ್ಲಿ ಬಂದಾಗ ಅವರನ್ನು ಪರಮಾತ್ಮನು ಸಹಾನುಭೂತಿಯಿಂದ ಗೌರವಿಸಿ ಕುಳ್ಳಿರಿಸಿಕೊಂಡು ಅವರ ತೊಂದರೆಗಳ ಬಗ್ಗೆ ವಿಚಾರಿಸಿದ. ಮುನಿಗಳು ಎಲ್ಲವನ್ನೂ ಹೇಳಿದರು. ಶ್ರೀಮನ್ನಾರಾಯಣನು ಮುನಿಗಳಿಗೆ ಅಭಯ ನೀಡಿದ. "ಬ್ರಹ್ಮದೇವನು ನಿಮ್ಮ ಕಷ್ಟ ದೂರು ಮಾಡುತ್ತಾನೆ" ಎಂದು ಹೇಳಿದ. ಮುನಿಗಳು ಬ್ರಹ್ಮದೇವನನ್ನು ಭಕ್ತಿಯಿಂದ ಪ್ರಾರ್ಥಿಸಿದರು.

ಮಹಾದೇವನಾದ ಬ್ರಹ್ಮದೇವನು ಮಹಾರುದ್ರಾವತಾರ ತಾಳಿದ. ಮುನಿಗಳ ವೇದನೆ ಕೇಳಿ, ಕೋಪೋದ್ರಿಕ್ತನಾಗಿ ಸಿಂಹಗರ್ಜನೆ ಮಾಡಿದ. ತಕ್ಷಣ ತನ್ನ ಜಡೆಯನ್ನು ಭೂಮಿಗೆ ಅಪ್ಪಳಿಸಿದಾಗ ಜಡೆಯಿಂದ ಅದ್ಭುತ ಆಕಾರದ ಮಹಾಮಾಯೆ ಕಾಣಿಸಿಕೊಂಡಳು. ಅವಳ ರೂಪು ವಿಕೃತವಾಗಿತ್ತು. ನಾಲಿಗೆ ಹೊರಚಾಚಿ, ಕಣ್ಣುಗಳಿಂದ ಬೆಂಕಿ ಕಾರುತ್ತ ಕೈಗಳಲ್ಲಿ ಅನೇಕ ಆಯುಧಗಳನ್ನು ಹಿಡಿದು ಭೀಕರ ಸ್ವರೂಪ ತಾಳಿ ನಿಂತಳು.

"ಆ ಕ್ರೂರ ರಾಕ್ಷಸರನ್ನು ನುಂಗಿ ನೀರು ಕುಡಿಯುತ್ತೇನೆ" ಎಂದು ಆಕಾಶ–ಪಾತಾಳ ಭೋರ್ಗರೆಯುವಂತೆ ಗರ್ಜಿಸಿದಳು. ದೇವತೆಗಳೂ ಸಹ ಭಯಭೀತರಾದರು. ಈ ಮಹಾಮಾಯೆಗೆ ಮಹಾದೇವನ ಆಜ್ಞೆಯಂತೆ ತುಪ್ಪದ ಅಭಿಷೇಕ ಮಾಡಿದಾಗ ಶಾಂತಳಾದಳು.

ಶಿವನು ಹೇಳಿದ: ಮಹಾಮಾಯೆ, ಆ ಕ್ರೂರ ರಾಕ್ಷಸರಾದ ಮಣಿ–ಮಲ್ಲರ ಚೆಂಡಾಡಲು ನಾನು ಶೌಂಡ ರೂಪದಲ್ಲಿ ಭೂಮಿಗೆ ಬರುತ್ತೇನೆ. ನೀನು ರಣಚಂಡಿಯಾಗಿ ನನ್ನೊಂದಿಗೆ ಬಾ". ಮುನಿಗಳು ಆನಂದತುಂದಿಲರಾದರು.

ಶಿವನು ಮಾರ್ತಾಂಡ ಭೈರವನ ಅವತಾರ ತಾಳಿ ಭೂಮಿಗೆ ಇಳಿದ. ಬ್ರಹ್ಮನ ಅಪೇಕ್ಷೆಯಂತೆ ದಂತೆ ಶ್ರೀಹರಿಯು ಹೆಗ್ಗಯ್ಯನಾಗಿ ಬಂದ. ಗಣಪತಿಯೂ ಕೂಡ ನಿರ್ವಿಘ್ನ ಮಂಗಳದಾಯಕನಾಗಿ ಜೊತೆಗೆ ಬಂದ. ಅಲ್ಲದೆ ದೇವಗಣದ ದಂಡನಾಯಕನಾಗಿ ಭೂಲೋಕವನ್ನು ರಾಕ್ಷಸರಿಂದ ರಕ್ಷಣೆ ಮಾಡಲು ಸರ್ವಶಕ್ತನು ಹೊರಟಾಗ ಅವನೊಂದಿಗೆ ಭೂತಬೇತಾಳ, ಪಿಶಾಚಿಗಳು ಮೊದಲಾದ 'ಏಳು ಕೋಟಿ' ಗಣಗಳು ಭೂಲೋಕಕ್ಕೆ ಬಂದವು. ಅಲ್ಲದೆ ಸರ್ವಶಕ್ತಿಯಾದ ಪಾರ್ವತಿ ಕೂಡ ಶಿವನ ಅವತಾರವಾದ ಮಾರ್ತಾಂಡ ಭೈರವನ ಕೂಡ ಬಂದಳು.

ದೇವಗಣದ ಸೈನ್ಯ ಬರುವುದನ್ನು ನೋಡಿ ರಾಕ್ಷಸರು ತಮ್ಮ ಅಧಿಪತಿಗಳಾದ ಮಲ್ಲ–ಮಣಿಕರಿಬ್ಬರಿಗೆ ತಿಳಿಸಿದರು. ಮಲ್ಲನು ಗುಡ್ಡದ ಮೇಲಿಂದ ಶಿವನ ಸೈನ್ಯ ನೋಡಿ ಹೆದರಲಿಲ್ಲ. ಶಿವನ ವಿರುದ್ಧ ಹೋರಾಡಿ ಜಯಸಲು ಪಣತೊಟ್ಟ. ತನ್ನ

ಶ್ರೀ ಲಕ್ಷ್ಮಣ ಮಾಳದಕರ

ರಾಕ್ಷಸ ಗಣವನ್ನು ಕೂಡಿ ಯುದ್ಧಕ್ಕೆ ಸಿದ್ಧನಾದ. ಸರಿ, ಯುದ್ಧ ಪ್ರಾರಂಭವಾಗಿ ರಾಕ್ಷಸರ ಪಡೆ ಸೋತಿತು. ಮಲ್ಲ ಚಿಂತೆಗೀಡಾದ. ನಂತರ ಖಡ್ಗ ದುಷ್ಟ ಎಂಬ ರಕ್ಕಸನ ದಂಡಾಧಿಪತ್ಯದಲ್ಲಿ ರಾಕ್ಷಸರ ಸೈನ್ಯ ಕಳುಹಿಸಿದ. ಖಡ್ಗದುಷ್ಟನೂ ಯುದ್ಧದಲ್ಲಿ ಹತನಾದ.

ನಂತರ ಮತ್ತೆ ಉಲ್ಕಾಮುಖ ರಾಕ್ಷಸನ ದಂಡಾಧಿಪತ್ಯದಲ್ಲಿ ಮತ್ತೆ ರಾಕ್ಷಸರ ಸೈನ್ಯ ಯುದ್ಧಕ್ಕೆ ಬಂದಿತು, ಆದರೆ ಉಲ್ಕಾಮುಖನೂ ಸಾವನ್ನಪ್ಪಿದ. ಆ ಮೇಲೆ ಲೋಮ ದಳಪತಿಯಾದ. ಲೋಮನೂ ಹತನಾದ. ಕ್ರೂರ ರಾಕ್ಷಸರ ಒಡೆಯ ಮಲ್ಲನಿಗೆ ಭಾರೀ ಸಿಟ್ಟು ಬಂದಿತು. ಆಗ ತಾನೇ ಯುದ್ಧಕ್ಕೆ ಹೋಗಲು ಸಿದ್ಧನಾದ. ಆಗ ತಮ್ಮ ಮಣಿಕಾಸುರ ತಾನೇ ಯುದ್ಧಕ್ಕೆ ಹೋಗಲು ಮುಂದಾದ. ಅವನೂ ಸತ್ತ.

ನಂತರ ಮಲ್ಲನೇ ಯುದ್ಧಕ್ಕೆ ಹೊರಟ. ರಣರಂಗದಲ್ಲಿ ದೇವಗಣದ ಕೂಡ ಇದ್ದ ಮಹಾಮಾಯೆಯ ಭೀಕರ ಸ್ವರೂಪವನ್ನ ಮಲ್ಲ ನೋಡಿದ. ಆದರೂ ಯುದ್ಧ ನಡೆಸಿದ. ಮಹಾರುದ್ರನಾದ ಮಾರ್ತಾಂಡ ಭೈರವನು ಮಲ್ಲನ ಮೇಲೆ ಪಾಶುಪತಾಸ್ತ್ರ ಉಪಯೋಗಿಸಿದ. ಅದರ ಹೊಡೆತಕ್ಕೆ ಕೆಳಕೆ ಬಿದ್ದ ಮಲ್ಲ ರಾಕ್ಷಸನು ಪರಮಾತ್ಮನ ಕಾಲುಗಳನ್ನು ಹಿಡಿದು ತನ್ನ ತಲೆಯ ಮೇಲಿರಿಸಿಕೊಂಡ; ಅಲ್ಲದೆ ಪರಮಾತ್ಮನ ಪ್ರಾರ್ಥನೆ ಮಾಡತೊಡಗಿದ. ಮಾರ್ತಾಂಡ ಭೈರವನ ಪಾದಸ್ಪರ್ಶದಿಂದ ಮಲ್ಲರಾಕ್ಷಸನಿಗೆ ಜ್ಞಾನೋದಯವಾಯಿತು. ಅವನು ಪರಮಾತ್ಮನಲ್ಲಿ ಅನನ್ಯಭಾವದಿಂದ ವರ ಬೇಡಿದ.

"ನನ್ನ ಮೇಲೆ ಕರುಣಿಸು ದೇವಾ, ಭಕ್ತರು ಮೊದಲು ನನ್ನನ್ನು ಸ್ಮರಿಸಲಿ, ನಂತರ ನಿನ್ನ ನಾಮಸ್ಮರಣೆ ಮಾಡಲಿ. ಅಂದರೆ ನಿನ್ನನ್ನು "ಮಲ್ಲಾರಿ" ಎಂದು ಕರೆಯಲಿ. ಪಾಪಿಗಳು, ಚಂಡಾಲರು ನಿನ್ನ ಕಥಾಶ್ರವಣದಿಂದ ಪುಣ್ಯ ಪಡೆಯಲಿ. ನನ್ನ ತಲೆಯು ಯಾವಾಗಲೂ ನಿನ್ನ ಪಾದದ ಕೆಳಗೆ ಇರುವಂತೆ ಕರುಣೆ ತೋರು"

ಮಲ್ಲ ರಾಕ್ಷಸನ ಭಯ ಭಕ್ತಿಯ ಪ್ರಾರ್ಥನೆ ಕೇಳಿ ವರದ ಹಸ್ತವನ್ನು ಭಗವಂತನು ಅವನ ತಲೆಯ ಮೇಲಿಟ್ಟು, 'ಭಕ್ತಶಿರೋಮಣಿಯೇ ನಿನಗೆ ಕೊಟ್ಟಿರುವ ವರವನ್ನು ನನ್ನ ಭಕ್ತರಿಗೂ ಕೊಟ್ಟಿದ್ದೇನೆ. ಎಲ್ಲ ಭಕ್ತರೂ ನನಗೆ ಮೈಲಾರಲಿಂಗ ಎಂದು ಕರೆಯುವರು, ನೀನು ಶಿವಸಾನ್ನಿಧ್ಯ ಹೊಂದು' ಎಂದು ಆಶೀರ್ವದಿಸಿದ.

ಮಾಲತೇಶ ಮಹಾತ್ಮೆ ಅಥವಾ ಮೈಲಾರ ಲಿಂಗ ಮಹಾತ್ಮೆ ಅದ್ಭುತವಾದುದು. ಪ್ರತಿ ವರ್ಷವೂ ಭಾರತ ಹುಣ್ಣಿಮೆ ಮಾಘ ಬಹುಳ ಬಿದಿಗೆ ಅಂದರೆ ಮೈಲಾರ ಹುಣ್ಣಿಮೆ ಭಕ್ತರಿಗೆ ಮಹಾಸುದಿನ. ಭಾರತ ಹುಣ್ಣಿಮೆ ದಿನ ಮೈಲಾರದಲ್ಲಿ ದೊಡ್ಡ ರಥೋತ್ಸವ ಜರುಗುತ್ತದೆ.

"ಮಾರ್ಗಶೀರ್ಷ ಶುದ್ಧ ಷಷ್ಠಿ ತಿಥಿ, ರವಿವಾರ ಚಂದ್ರನು ಶತಭಿಷಾ ನಕ್ಷತ್ರದಲ್ಲಿದ್ದಾಗ ವಟವೃಕ್ಷದ ಕೆಳಗೆ ನಾನು ಲಿಂಗರೂಪದಲ್ಲಿ ಕಾಣಿಸಿಕೊಳ್ಳುವೆ. ಆ ಲಿಂಗ ಪೂಜಿಸಿದರೆ ಇಷ್ಟಾರ್ಥ ನೆರವೇರುವುದು. ವರ್ಷಾಕಾಲದಲ್ಲಿ ದೇವರಗುಡ್ಡದ ದೇವಸ್ಥಾನದ ಮೇಲ್ಗಡೆ ನಕ್ಷತ್ರ ರೂಪದಿಂದ ದರ್ಶನ ನೀಡಿ ನನ್ನ ಕುರುಹು ತೋರಿಸುವೆ".

"ನನ್ನ ಭಕ್ತರು ಭಕ್ತಿಯಿಂದ ಭಂಡಾರ ಧರಿಸುವುದು—ಅವರೇ ನನ್ನ ಭಕ್ತರು"

"ರಥಸಪ್ತಮಿಯ ದಿನ ಮಲ್ಲಾಸುರನು ಕೊಲ್ಲಲ್ಪಟ್ಟ ಶ್ರೀ ದೇವರಗುಡ್ಡದ ತೆಂಕನಮರಡಿಯಲ್ಲಿ ಮಾಲತಿ ಕೂಡ 10 ದಿನ ಇದ್ದು, 11 ನೇ ದಿನ ಅವಳೊಂದಿಗೆ ಮೈಲಾರಕ್ಕೆ ಬರುವೆ. ಅಲ್ಲಿ ಹೆಗ್ಗಯ್ಯನಾದ ಶ್ರೀಹರಿಯೂ ಇರುವನು".

ಶ್ರೀ ಮೈಲಾರಲಿಂಗನ ಭಕ್ತರು ಭಕ್ತಿಯಿಂದ ಭಂಡಾರ ಧರಿಸುವರು, ಕಂಬಳಿ ಅಂಗಿ, ಕಂಬಳಿ ಟೊಪ್ಪಿಗೆ ಹಾಕಿಕೊಳ್ಳುವರು. ಬೆನ್ನಿನ ಮೇಲೆ ತ್ರಿಶೂಲದ ಗುರುತು ಇರುತ್ತದೆ. ಇನ್ನೂ ಕೆಲವು ಭಕ್ತರು ಅಶ್ವವು ಶ್ರೀ ಮಾಲತೇಶನ ಪ್ರೀತಿಯ ವಾಹನವೆಂದು ಗುಡಿಯ ಮುಂದೆ ಭಕ್ತಿಯಿಂದ ಅಶ್ವದಂತೆ ಕುಣಿಯುವದು, ಮಾಲತೇಶನ ಭಕ್ತರು ಕೈಯಲ್ಲಿ ತೂದು, ತ್ರಿಶೂಲ ಧರಿಸುವುದು ಮಾಡುವರು, ಅವರಿಗೆ ಗೊರವರು ಎಂದು ಹೆಸರು.

ಈ ಭಕ್ತರು 'ಏಳು ಕೋಟಿ, ಏಳು ಕೋಟಿ' ಎಂದು ಕೂಗುವರು. ದೇವರಿಗೆ ಭಂಡಾರ ಹಚ್ಚುತ್ತಾರೆ. ಹೂವು, ಹಾಲು–ತುಪ್ಪ ಅರ್ಪಿಸುತ್ತಾರೆ. ಕಟ್ಟಿಗೆಯ ಕೊರಡಿಯಲ್ಲಿ ತ್ರಿಶೂಲದಂತೆ ಕಬ್ಬಿಣದ ಸಳ ನೆಟ್ಟು ಅದಕ್ಕೆ ಮಡಿಯಾದ ಬಟ್ಟೆ ಸುತ್ತಿ ಎಣ್ಣೆಯಲ್ಲಿ ಮುಳುಗಿಸಿ ದೀಪ ಹಚ್ಚುತ್ತಾರೆ. ಶಿವನ ನಾಮಸ್ಮರಣೆ ಮಾಡುತ್ತಾರೆ.

ಗಾಣಕ್ಕೆ ಸಿಕ್ಕಲ್ಲದೆ ಎಳ್ಳು, ಎಣ್ಣೆಯಾಗದು,
ಹೆಪ್ಪುಗಟ್ಟದೆ ಹಾಲು, ಮೊಸರು –
ಬೆಣ್ಣೆಯಾಗದು,
ಅರೆಸಿಕೊಳ್ಳದೆ ಗಂಧ, ವಾಸನೆ ಸೂಸದು,
ಕೊರೆಸಿಕೊಳ್ಳದೆ ಕಬ್ಬು, ಸಕ್ಕರೆಯಾಗದು,
ಭಕ್ತಿಯ ಬಂಧನಕ್ಕೊಳಗಾಗದೆ, ಮುಕ್ತಿ
ದೊರಕದು ನೋಡಾ
ಎನ್ನ ವರಗುರು ಶಿವಕುಮಾರ ಪ್ರಭುವೆ.

[16 ನೆ ಪುಟದಿಂದ]

ನಿಗೆ ಗಾಬರಿಯಾಗಿ ದಿಕ್ಕು ತೋಚದೆ ಅಲ್ಲಿಯೇ ಕದಲದೆ ಮೂಕನಾಗಿ ನಿಂತು ಬಿಟ್ಟನು. ಆಗ ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ "ಕೇಶಿ ಸಂಹಾರಸ್ಥಳದ ಮೃತ್ತಿಕೆ ತಂದು ಗಾಯಕ್ಕೆ ಹಚ್ಚು, ಆಗ ನಿನ್ನ ಮಾತೃ ಹತ್ಯಾದೋಷಾಪಹಾರವಾಗುತ್ತೆ, ನನ್ನ ಗಾಯವೂ ವಾಸಿಯಾಗುತ್ತೆ" ಎಂದನು. ಅದೇ ಪ್ರಕಾರ ಪರಶುರಾಮನು ನಂಜನಗೂಡಿಗೆ ಹೋಗಿ, ಅಲ್ಲಿಂದ ಮೃತ್ತಿಕೆಯನ್ನು ತಂದು ಶ್ರೀಮನ್ನಾರಾಯಣನ ಗಾಯಕ್ಕೆ ಹಚ್ಚಿ ತನ್ನ ಮಾತೃ ಹತ್ಯೆಯದೋಷವನ್ನು ಕಳೆದುಕೊಂಡನು. ಶ್ರೀಮನ್ನಾರಾಯಣನ ಗಾಯವೂ ವಾಸಿಯಾಯಿತು. ಆದ್ದರಿಂದ ಈ ಸ್ಥಳದ ಮೃತ್ತಿಕೆ ಸಕಲರೋಗವನ್ನು ನಿವಾರಿಸುವಂತಹದು.

ಕಲಿಯುಗದಲ್ಲಿ ವ್ಯಾಸರಿಂದ ಪ್ರೇರಿತರಾಗಿ ಸಮಸ್ತ ಜನಗಳೂ, ಕಪಿಲಾ ಕೌಂಡಿನೀ ಸಂಗಮಸ್ನಾನ ಮಾಡಿ ಸ್ವಾಮಿಯ ದರ್ಶನ ಮಾಡಿ ಅನೇಕ ಪುಣ್ಯಕೆಲಸಗಳಿಂದ ಕೈಲಾಸವನ್ನು ಸೇರುತ್ತಿದ್ದರು. ಆಗ ಯಮಲೋಕ ಪಾಳುಬೀಳಲಾರಂಭಿಸಿತು. ಯಮರಾಜ ಇದೆಂತಹ ಕೆಲಸವಾಯಿತೆಂದು ಯೋಚಿಸುತ್ತಿರುವಾಗ ನಾರದ ಮಹರ್ಷಿಗಳು ಬಂದು 'ಯಮರಾಜ ಯೋಚಿಸುತ್ತಿರುವೆ? ಏಕೆ ಇದಕ್ಕೆಲ್ಲಾ ಒಂದೇ ಮಾರ್ಗ, ನೀನು ಯೋಚಿಸಬೇಡ. ಈಗಲೇ ಹೋಗಿ ಕಲಿಯನ್ನು ಆಶ್ರಯಿಸು' ಎಂದು ಹೇಳಿದರು. ಆಗ ಕಲಿಯು ಈಶ್ವರನನ್ನು ಪ್ರಾರ್ಥಿಸಲು 'ಈ ಗಳಪುರಿ ಕ್ಷೇತ್ರ ವಿನಹ ಬೇರೆ ಕ್ಷೇತ್ರದಲ್ಲಿ ನಿನ್ನ ಅಧಿಕಾರ ನಡೆಯಲಿ' ಎಂದು ಅಪ್ಪಣೆ ಇಟ್ಟನು. ಆದ್ದರಿಂದ ಗಳಪುರಿ ಅಥವಾ ನಂಜನಗೂಡು ಕ್ಷೇತ್ರಕ್ಕೆ ಕಲಿಯ ಬಾಧೆ ಇಲ್ಲ. ಈ ಕ್ಷೇತ್ರಕ್ಕೆ ಬಂದು ಕಪಿಲಾ ನದಿಯಲ್ಲಿ ಸ್ನಾನಮಾಡಿ ಸ್ವಾಮಿ ದರ್ಶನ ಮಾಡಿದರೆ ತುಂಬಾ ಭಾಗ್ಯಕರ ಮತ್ತು ಕಲಿಯ ಭಯವಿರುವುದಿಲ್ಲ, ಸಕಲ ರೋಗ ಪಾಪ ಪರಿಹಾರ.

ಮೈಸೂರುಹುಲಿ ಟಿಪ್ಪುಸುಲ್ತಾನ್, ರಾಜ್ಯಭಾರ ಮಾಡುತ್ತಿರುವಾಗ ಪಟ್ಟದ ಆನೆಯು ತನ್ನ ಕಣ್ಣು ಕಳೆದುಕೊಂಡಿತು. ಟಿಪ್ಪು ಬೇಕಾದ ವೈದ್ಯಮಾಡಿಸಿದ. ಆದರೆ ಕಣ್ಣು ಬರಲಿಲ್ಲ, ಯಾರ ಮಾತನ್ನೋ ಕೇಳಿ ಶ್ರೀ ನಂಜುಂಡೇಶ್ವರ ಸ್ವಾಮಿಗೆ ಹರಕೆ ಹೊತ್ತು 48 ದಿವಸ ಅಭಿಷೇಕ, ಅರ್ಚನೆ, ಮೊದಲಾದ ಸೇವೆಗಳನ್ನು ಭಕ್ತಿಯಿಂದ ಮಾಡಿಸಿದ. ನಂತರ ಆನೆಗೆ ಹೋದ ಕಣ್ಣು ಎಂದಿನಂತೆ ಬಂದಿತು. ಟಿಪ್ಪುಸುಲ್ತಾನ್ ದೇವಸ್ಥಾನವನ್ನು ಕೆಡವಿಹಾಕಿಸಬೇಕೆಂದಿದ್ದವನು, ಕೆಡವದೆ ಆ ದೇವಸ್ಥಾನಕ್ಕೆ ಅಭಿವೃದ್ಧಿ ಕಾರ್ಯವನ್ನು ಮಾಡಿಸಿ ಒಂದು ಪಚ್ಚೆ ಲಿಂಗವನ್ನು ಪ್ರತಿಷ್ಠಾಪಿಸಿದ್ದಾನೆ. ಅಲ್ಲದೆ ದೇವರಿಗೆ ಬೆಳ್ಳಿ ಬಟ್ಟಲನ್ನು ಕಾಣಿಕೆಯಾಗಿ ಕೊಟ್ಟಿರುತ್ತಾನೆ. ಈಗಲೂ ಸಹ ಆ ಬೆಳ್ಳಿಬಟ್ಟಲನ್ನು ಕಾಣಬಹುದು. ಅಲ್ಲದೆ ಅದರ ಮೇಲೆ ಟಿಪ್ಪುಸುಲ್ತಾನ್ ಹೆಸರು ಕಾಣಬಹುದು. ಈ ತೆರದ ನಿದರ್ಶನಗಳು ಬೇಕಾದಷ್ಟಿವೆ

ಶ್ರೀಕಂಠೇಶ್ವರಸ್ವಾಮಿಯ ದೇವಸ್ಥಾನವನ್ನು ಎಂದು, ಯಾರು, ಕಟ್ಟಿಸಿದರೆಂಬುವನ್ನು ನಿರ್ಧರಿಸುವುದು ಸಾಧ್ಯವಿಲ್ಲ. ಕ್ರಿ.ಶ. 1517 ನೇ ಇಸವಿಯಲ್ಲಿ ದೇವರಿಗೆ 3ನೇ ಜಾವದಲ್ಲಿ ಅಭಿಷೇಕಕ್ಕೆ ಒಬ್ಬರು ದತ್ತಿ ಕೊಟ್ಟಿರುವುದಾಗಿ ಶಾಸನಗಳಿವೆ. ನಂತರ ಮೈಸೂರು ದೊರೆಗಳು ಅಭಿವೃದ್ಧಿಗೊಳಿಸಿದರು. ದೇವಸ್ಥಾನದ ಪ್ರಕಾರದಲ್ಲಿ 63 ಭಕ್ತ ವಿಗ್ರಹಗಳು 11 ನೇ ಶತಮಾನದಲ್ಲಿ ಚೋಳರಿಂದ ಪ್ರತಿಷ್ಠಿತವಾದುವೆಂದು ತಿಳಿದು ಬರುತ್ತದೆ. ಆದ್ದರಿಂದ ಈ ದೇವಸ್ಥಾನವು ಬಹು ಪುರಾತನ ಎಂಬುದರಲ್ಲಿ ಸಂದೇಹವೇ ಇಲ್ಲ.

ಈ ದೇವಸ್ಥಾನಕ್ಕೆ ಎಲ್ಲಾ ಕೋಮಿನ ಭಕ್ತಾದಿಗಳು ಇದ್ದಾರೆ. ಶ್ರೀವೈಷ್ಣವರಲ್ಲಿಯೂ ಅಂದರೆ ವಿಶೇಷವಾಗಿ ಹೆಬ್ಬಾರು ವೈಷ್ಣವರಲ್ಲಿ ಕೆಲವು ಕುಟುಂಬದವರು ಈ ದೇವಸ್ಥಾನಕ್ಕೆ ಒಕ್ಕಲಾಗಿ ಸೇವೆ ನಡೆಸುತ್ತಿದ್ದಾರೆ.

ನಂಜನಗೂಡಿಗೆ ಮೈಸೂರಿನಿಂದ ಅನೇಕ ಬಸ್ಸುಗಳ ಸೌಕರ್ಯವಿದೆ. ಬೆಂಗಳೂರಿನಿಂದಲೂ ಸಾರಿಗೆ ಸೌಲಭ್ಯವಿದೆ. ಭಕ್ತಾದಿಗಳು ಜೀವನದಲ್ಲಿ ಒನ್ಮೆಯಾದರೂ ಭೂಕೈಲಾಸ ಎಂದು ಪ್ರಸಿದ್ಧಗೊಂಡಿರುವ ನಂಜನಗೂಡಿಗೆ ಹೋಗಿ ಕಪಿಲಾ ನದಿಯಲ್ಲಿ ಸ್ನಾನ ಮಾಡಿ ದೇವರ ದರ್ಶನ ಮಾಡಿದರೆ ತಮ್ಮ ಕಷ್ಟ ಪರಿಹಾರವಾಗುತ್ತದೆ. ಇಷ್ಟಾರ್ಥಗಳು ನೆರವೇರುತ್ತವೆ. ★

(15ನೆ ಪುಟದಿಂದ)

ಎಂದು ಹೇಳಿದಂತೆ ಭಗವಂತನಾದ ಮಹಾವಿಷ್ಣುವು ಮಹಾಲಕ್ಷ್ಮಿಯ ಸಹಿತನಾಗಿ ಇಳೈಯ ಪೆರುಮಾಳ್ ಆದ ಲಕ್ಷ್ಮಣ, ಕಿರಿಯ ತಿರುವಡಿ ಎನ್ನುವ ನಾಲ್ಕು ಜನ ಬಂದು ಹೋದರು ಎಂದು ಕೊಂಡು, ಅವರು ಹೋದರು ಎನ್ನುವ ಮಾರ್ಗದಲ್ಲೇ ಹೊರಟರು. ಎದುರಿಗೆ ಸಿಕ್ಕಿದವರನ್ನೆಲ್ಲಾ

"ಈ ಮಾರ್ಗಗಲ್ಲಿ ಹೊಂದವರನ್ನು
ನೋಡಿದಿರಾ ?"

—ಎಂದು ಕೇಳಲು, ಅವರು

"ಹೋಗ್ತಿದಾರೆ, ಹೋಗ್ತಿದಾರೆ"

—ಎಂದು ಹೇಳತೊಡಗಿದರು.

ಹೀಗೆ ಅವರನ್ನೇ ಹುಡುಕುತ್ತಾ ವೇಗವೇಗವಾಗಿ ಪ್ರಯಾಣ ಮಾಡಿ, ಗಂಗೈಕೊಂಡ ಚೋಳಪುರವನ್ನು ತಲುಪಿದರು. ಅಲ್ಲಿ ರಾಜಮಾರ್ಗದಿಂದ ಹಿಡಿದು, ಕೆಳಗಿನ ಬೀದಿಯವರೆಗೂ ಹೋಗಿ ಅಲ್ಲಿರುವವರನ್ನು ಮೇಲೆ ಕೇಳಿದ ಪ್ರಶ್ನೆಯನ್ನೇ ಕೇಳಲು, ಅವರು ತಾವು ನೋಡಲಿಲ್ಲ ಎಂದು ಹೇಳಿದರು

ಆದರೂ ಅಲ್ಲಿಯೇ ಕುಳಿತು, ಹಾಗೆ ಹೊರಟು ಹೋದ ಬೇಟೆಗಾರರಿಗಾಗಿ ಕಾಯತೊಡಗಿದರು. ಹಾಗೆ ಎಷ್ಟೋ ವರ್ಷಗಳವರೆವಿಗೆ ಅವರಿಗಾಗಿ ನಿರೀಕ್ಷಿಸುತ್ತಿದ್ದರೂ ಕಾಣಬರದಿದ್ದರಿಂದ ಬಿಕ್ಕಿ ಬಿಕ್ಕಿ ಅಳತೊಡಗಿದರು. ಅದೇ ಮೋಹವಾಗಿ ಪಂಚಮಿಸಿ ಆ ಹೇತುವಿನಲ್ಲಿ, ಆ ಕಾರಣದಿಂದ ಅಲ್ಲೇ ಪರಮಪದವನ್ನು ಸೇರಿದರು.

ಈ ವೃತ್ತಾಂತವನ್ನು ಶಿಷ್ಯ ವರ್ಗದವರು, ಆಲಿಸಿ ಸಿಡಿಲು ಬಡಿದವರಂತಾಗಿ, ಶೋಕಾಕುಲರಾದರು. ನಂತರ ಅವರೆಲ್ಲರೂ ಗಂಗೈಕೊಂಡ ಚೋಳಪುರಕ್ಕೆ ಹೋಗಿ, ದಹನ ಸಂಸ್ಕಾರಾದಿಗಳನ್ನು ಭಯಭಕ್ತಿಗಳಿಂದ ನೆರವೇರಿಸಿದರು.

ಕುರುಕೈಕಾವಲಪ್ಪನ್ ಎನ್ನುವವರು ನಾಥಮುನಿಗಳ ಬಳಿ ಯೋಗ ರಹಸ್ಯ ಉಪದೇಶವನ್ನು ಪಡೆದಿದ್ದರಿಂದ ನಾಥಮುನಿಗಳು ಸದಾಕಾಲದಲ್ಲೂ ಯೋಗಸಮಾಧಿಯಾಗುತ್ತಿದ್ದ ಸ್ಥಳದ ಬಳಿಯಲ್ಲೇ ತಾವೂನೂ ಯೋಗಸಮಾಧಿಯಲ್ಲಿ ಇರತೊಡಗಿದರು.



# ಗೃಹಲಕ್ಷ್ಮಿ



ದ್ಯೂತದಲ್ಲಿ ಸೋತು ತಮ್ಮ ಪಣಕ್ಕೆ ಅನುಸಾರವಾಗಿ ಪಾಂಡವರು ಹನ್ನೆರಡು ವರ್ಷ ವನವಾಸ ಹಾಗೂ ಒಂದು ವರ್ಷ ಅಜ್ಞಾತವಾಸಮಾಡಲು ಕಾಡನ್ನು ಸೇರಿದರು. ಆಗ ಈ ವಿಷಯವನ್ನು ತಿಳಿದ ಶ್ರೀಕೃಷ್ಣನು ಅವರನ್ನು ಸಂತೈಸಲು ಸತ್ಯಭಾಮೆಯೊಡನೆ ಅವರಿದ್ದಲ್ಲಿಗೆ ಹೋದನು. ಶ್ರೀಕೃಷ್ಣನು ಪಾಂಡವರ ಯೋಗಕ್ಷೇಮವನ್ನು ವಿಚಾರಿಸಿದನು. ಅಲ್ಲಿ ಬ್ರಾಹ್ಮಣರಿಗೂ ಮತ್ತು ಪಾಂಡವರಿಗೂ ಧರ್ಮದ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಈ ಕಡೆ ದ್ರೌಪದಿ ಮತ್ತು ಉಳಿದ ಪಾಂಡವರ ಪತ್ನಿಯರೂ ಮುನಿ ಪತ್ನಿಯರೂ, ಹಾಗೂ ಸತ್ಯಭಾಮೆಯೂ ಒಂದೆಡೆ ಕುಳಿತು ಬಹಳ ಸಂತೋಷದಿಂದ ಹಾಸ್ಯ ವಿನೋದಗಳಲ್ಲಿ ತಲ್ಲೀನರಾಗಿದ್ದರು. ದ್ರೌಪದಿ ಮತ್ತು ಸತ್ಯಭಾಮೆಯರು ಬಹಳ ದಿವಸಗಳ ನಂತರ ಭೇಟಿಯಾಗಿದ್ದರಿಂದ ಅವರಿಗೆ ಮಾತನಾಡಲು ಬಹಳ ವಿಷಯಗಳಿದ್ದವು. ಹೀಗೆ ಇಬ್ಬರೂ ಮಾತನಾಡುತ್ತಿರುವಾಗ ಕೃಷ್ಣನ ಪತ್ನಿಯಾದ ಸತ್ಯಭಾಮೆಯು ದ್ರೌಪದಿಗೆ ಹೇಳುವಳು.

"ಎಲೈ ದ್ರೌಪದಿಯೆ, ನೀನು ಪಾಂಡವರ ಜೊತೆಯಲ್ಲಿ ಯಾವ ರೀತಿ ವ್ಯವಹರಿಸುವೆ. ನಾನು ಬಂದಾಗಿನಿಂದಲೂ ನೋಡುತ್ತಿದ್ದೇನೆ. ನಿನ್ನ ಪತಿಗಳು ಅತ್ಯಂತ ಪ್ರೀತಿಯಿಂದ ಪ್ರತಿಯೊಂದು ವ್ಯವಹಾರದಲ್ಲಿಯೂ ನಿನ್ನನ್ನು ಸೇರಿಸಿಕೊಂಡು ಸಲಹೆ ಕೇಳುವರು. ಚರ್ಚೆ ಇತ್ಯಾದಿಗಳಲ್ಲಿ ನಿನ್ನ ಜೊತೆಯಲ್ಲಿ ಸಮಾನ ವ್ಯವಹಾರ ಮಾಡುತ್ತಾರೆ. ಇದನ್ನು ಕಂಡರೆ ನನಗೆ ಅವರು ನಿನ್ನ ವಶವರ್ತಿಗಳಂತೆ ವ್ಯವಹರಿಸುತ್ತ ಪ್ರತಿಯೊಂದು ಕಾರ್ಯದಲ್ಲಿಯೂ ನಿನ್ನ ಅಭಿಪ್ರಾಯವನ್ನು ಬಯಸುತ್ತಿರುವರು" ಎಂದು ಕಾಣುತ್ತದೆ.

'ಈ ರೀತಿಯಾಗಿ ನನಗೂ ಅಧಿಕಾರ ಮತ್ತು ಇಂತಹ ಮಹತ್ವವು ಸಿಗಬೇಕೆಂಬ ಬಯಕೆ ಇದೆ. ಇದರ ಪ್ರಾಪ್ತಿಗಾಗಿ ನೀನು ಏನು ಮಾಡಿರುವೆ? ವ್ರತವನ್ನು ಆಚರಿಸಿದೆಯಾ, ಸ್ನಾನ–ಜಪ–ತಪಾದಿಗಳನ್ನು ಮಾಡಿದೆಯಾ, ಅಥವಾ ಮಾಟ, ಮಂತ್ರ ಮೂಲಿಕೆ ಔಷಧಿಗಳ ಪ್ರಯೋಗವನ್ನಾದರೂ ಮಾಡಿದೆಯಾ, ಏನು ಮಾಡಿದೆ, ನನಗೂ ಹೇಳುವೆಯಾ?'

'ನನಗೂ ಈ ಜಗತ್ಪಾಲಕನಾದ ಕೃಷ್ಣನು ಎಲ್ಲ ಹೆಂಡತಿಯರನ್ನು ಬಿಟ್ಟು ನನ್ನ ವಶವರ್ತಿಯಾಗಿ ನಾನು ಹೇಳಿದಂತೆ ಯಾವಾಗಲೂ ನನ್ನ ಜೊತೆಯಲ್ಲಿಯೇ ಇರಬೇಕೆಂಬ ಮಹದಾಶಯವಿದೆ. ಹೇಳು, ಯಾವ ಹೆಂಡತಿಗೆ ತಾನೆ ತನ್ನ ಗಂಡನು ತನ್ನ ಹತ್ತಿರವೇ ಇರಬೆಂಬ ಬಯಕೆ ಇರುವದಿಲ್ಲ. ಪತಿಯನ್ನು ವಶೀಕರಿಸುವ ಮಂತ್ರ ನನಗೂ ಹೇಳಿಕೊಡುವೆಯಾ?'

ಇದನ್ನು ಕೇಳಿದ ದ್ರೌಪದಿಯು ಜೋರಾಗಿ ನಗುವಳು. ಮತ್ತೆ ಮಂದಹಾಸದಿಂದ "ಅತ್ತಿಗೆ, ಹದಿನಾಲ್ಕು ಲೋಕಕ್ಕೆ ಅಧಿಪತಿಯಾದ ಕೃಷ್ಣನ ಪ್ರಿಯಪತ್ನಿಯಾದ ನೀನು ಎಲ್ಲವೂ ಗೊತ್ತಿದ್ದರೂ ನನ್ನ ಮುಖದಿಂದ ಕೇಳಲು ಬಯಸುವೆಯಾ? ಚಿಂತೆಯಿಲ್ಲ. ನಿನಗೆ ಗೊತ್ತಿದ್ದರೂ, ವಯಸ್ಸಿನಲ್ಲಿ

## ಪತಿವ್ರತಾಧರ್ಮ

ಪತ್ನಿಯ ಕರ್ತವ್ಯವನ್ನು ಹೇಳುವೆ ಎಲ್ಲವನ್ನೂ ಕೇಳಿ ತಪ್ಪಿದ್ದರೆ ಸುಧಾರಿಸು".

'ಸತ್ಯಭಾಮೆ! ಪತಿಯನ್ನು ವಶಪಡಿಸಿಕೊಳ್ಳುವ ಉಪಾಯ ವ್ರತ, ತಪಸ್ಸು, ಮಾಟಮಂತ್ರ, ಮೂಲಿಕೆಗಳಲ್ಲಿ ಇಲ್ಲ. ಹೊರತು ಪತಿಯನ್ನು ಒಲಿಸಿಕೊಳ್ಳಲು ಒಂದೇ ಒಂದು ದಿವ್ಯೌಷಧ, ಎರಡಕ್ಷರದ ದಿವ್ಯಮಂತ್ರ ಯಾವುದೆಂದರೆ 'ಪ್ರೀತಿ'. ಮಾಟ, ಮಂತ್ರ, ಔಷಧ ಉಪಯೋಗಿಸುವ ಸ್ತ್ರೀಯರು ಇವುಗಳಿಂದ ಪತಿಯ ಸ್ವಾಸ್ಥ್ಯವನ್ನು ಕೆಡಿಸಿ ಬುದ್ಧಿಭ್ರಮಣೆ ಮಾಡಿ ಅವನನ್ನು ಎಲ್ಲ ಕಾರ್ಯಗಳಿಗೂ ಅಯೋಗ್ಯರನ್ನಾಗಿ ಮಾಡಿ ತಮ್ಮ ಕಾಲಮೇಲೆಯೇ ಕಲ್ಲು ಹಾಕಿಕೊಳ್ಳುವರು. ಜೇನಿನಂತಹ ಸುಖಮಯ ಸಂಸಾರದಲ್ಲಿ ವಿಷ ಹಿಂಡುವರು'.

'ಪತಿಗೆ ತನ್ನ ಪತ್ನಿಯು ತನ್ನನ್ನು ವಶದಲ್ಲಿಟ್ಟುಕೊಳ್ಳಲು ಯಾವುದೇ ಮಂತ್ರ ತಂತ್ರಗಳನ್ನು ಅಥವಾ ಔಷಧಿಗಳನ್ನು ಉಪಯೋಗಿಸುತ್ತಿದ್ದಾಳೆಂದು ಗೊತ್ತಾದಾಗ ಅವನು ಮನೆಯಲ್ಲಿ ಹಾವು ಹೊಕ್ಕರೆ ಹೇಗೆ ಉದ್ವಿಗ್ನನಾಗಬೇಕೋ ಹಾಗಾಗುತ್ತಾನೆ.'

'ಉದ್ವಿಗ್ನನಾದವನಿಗೆ ಶಾಂತಿ ಎಲ್ಲಿ? ಅಶಾಂತನಿಗೆ ಸುಖವೆಲ್ಲಿ? ಆದ್ದರಿಂದ ಇಂತಹ



ಕುಟಿಲಮಾರ್ಗದಿಂದ ಪತಿಯು ಎಂದೂ ತನ್ನ ಪತ್ನಿಯ ವಶವಾಗುವುದಿಲ್ಲ'.

'ಇಂತಹ ಸಮಯದಲ್ಲಿ ಬೇರೆಯವರು ಕೊಟ್ಟ ಔಷಧಿಯನ್ನು ತಮ್ಮ ಪತಿಗೆ ಕೊಟ್ಟು ಅವರನ್ನು ಅತ್ಯಂತ ಭಯಂಕರವಾದ ರೋಗಕ್ಕೆ ಈಡು ಮಾಡುತ್ತಾರೆ. ಏಕೆಂದರೆ ಶತ್ರುಗಳಿಗೆ ಅವನನ್ನು ಕೊಲ್ಲಲು ಇದು ಒಳ್ಳೆಯ ಅವಕಾಶ. ಈ ರೀತಿಯಾಗಿ ಮಂತ್ರಗಳಿಂದಾಗಲೀ; ಔಷಧಿಗಳಿಂದಾಗಲೀ ಇಂತಹ ಸ್ತ್ರೀಯರು ತಮ್ಮ ಪತಿಯನ್ನು ಭಯಂಕರರೋಗಗಳ ರೋಗಿಯನ್ನಾಗಲೀ, ಅಸಮಯದಲ್ಲಿ ವೃದ್ಧನನ್ನಾಗಲೀ, ನಪುಂಸಕನನ್ನಾಗಲೀ, ಮಾನಸಿಕ ರೋಗಿಯಾಗಲೀ ಅಥವಾ ಕಿವುಡನೋ ಮೂಕನೋ ಆಗುವಂತೆ ಮಾಡುತ್ತಾರೆ. ಇಂತಹ ಸ್ತ್ರೀಯರು ತಮ್ಮ ಪತಿಯನ್ನು ಅನೇಕ ಕಷ್ಟಗಳಿಗೆ ಗುರಿ ಮಾಡುತ್ತಾರೆ. ಆದ್ದರಿಂದ ಸಾಧ್ವಿಯರು ಇಂತಹ ಯಾವುದೇ ಕೆಟ್ಟ ತಂತ್ರಗಳನ್ನು ಮಾಡುವುದಿಲ್ಲ.'

'ಸತ್ಯಭಾಮಾ! ಉದಾರ ಚರಿತರಾದ ಪಾಂಡವರ ವಿಷಯದಲ್ಲಿ ನಾನು ಮಾಡುವ ಪ್ರತಿಯೊಂದು ವ್ಯವಹಾರವನ್ನು ನಿನ್ನ ಮುಂದೆ ಸತ್ಯವಾಗಿ ಹೇಳುವೆ ಕೇಳು'.

ಶ್ರೀಮತಿ ಬಿ. ಎಸ್. ರಮಾಮಣಿ

'ವಿನಯವೇ ಭೂಷಣ: ನಾನು ಸಂಯಮದಿಂದಿದ್ದು, ಯಾವತ್ತೂ ಅಹಂಕಾರ ಮತ್ತು ಕಾಮಕ್ರೋಧಗಳನ್ನು ಬಿಟ್ಟು, ಪಾಂಡವರ ಮತ್ತು ಅವರ ಇತರ ಪತ್ನಿಯರ ಸೇವೆಯನ್ನು ನಿರಂತರವಾಗಿ ಮಾಡುತ್ತೇನೆ. ನನ್ನ ಇಚ್ಛೆಗಳನ್ನು ಹತ್ತಿಕ್ಕಿ ಸೇವಾಮನೋಭಾವದಿಂದ ಅವರ ಇಚ್ಛೆಗೆ ಅನುಸಾರವಾಗಿ ಸೇವೆಯನ್ನು ಮಾಡುತ್ತೇನೆ'.

'ನನ್ನ ಬಾಯಿಂದ ಕೆಟ್ಟ ಮಾತುಗಳು ಬರದಂತೆ ಬಹಳ ಎಚ್ಚರದಿಂದಿರುತ್ತೇನೆ. ಅಸಭ್ಯವಾಗಿ ಎಲ್ಲೂ ನಿಲ್ಲುವುದಿಲ್ಲ ನಿರ್ಲಜ್ಜಳಾಗಿ ಅಲ್ಲಿ ಇಲ್ಲಿ ನೋಡುವುದಿಲ್ಲ. ನನ್ನ ಪ್ರತಿಯೊಂದು ವ್ಯವಹಾರದಲ್ಲಿ ಬಹಳ ಎಚ್ಚರದಿಂದಿರುತ್ತೇನೆ. ಏಕೆಂದರೆ ಕೆಟ್ಟಮಾತು ಹೇಳುವುದರಿಂದ, ನಿರ್ಲಜ್ಜಳಾಗಿ ವರ್ತಿಸುವುದರಿಂದ ಅವ್ಯವಸ್ಥಿತಳಾಗಿ ಕೂಡುವುದರಿಂದ ನಮ್ಮ ಯೋಗ್ಯತೆಯನ್ನು ಕಳೆದುಕೊಳ್ಳುತ್ತೇವೆ. ಆದ್ದರಿಂದ ಯಾವಾಗಲೂ ಇವುಗಳಿಂದ ದೂರ ಉಳಿಯುತ್ತೇನೆ'.

'ಕುಂತಿಯ ಮಕ್ಕಳಾದ ಈ ಪಾಂಡವರು ಸೂರ್ಯಾಗ್ನಿಗಳಂತೆ ತೇಜಸ್ವಿಗಳು, ಚಂದ್ರನಂತೆ ಆಹ್ಲಾದಕರೂ, ಮಹಾರಥಿಗಳೂ, ದೃಷ್ಟಿಯಿಂದಲೇ ಶತ್ರುವಿನ ಪ್ರಾಣಾಪಹಾರಕರೂ, ಬಲಿಷ್ಠರೂ, ಶ್ರೇಷ್ಠ ಪರಾಕ್ರಮಿಗಳೂ, ಮಹಾನ್ ಪ್ರತಾಪಿಗಳೂ ಆಗಿರುತ್ತಾರೆ. ಇವರ ಸಂಗತಿಯಲ್ಲಿದ್ದ ನಾನು ನನ್ನ ಎದುರಿನಲ್ಲಿ ಅನ್ಯದೇವತೆಯಾಗಲೀ ಸಾಕ್ಷಾತ್ ಕಾಮನೇ ಬಂದರೂ ಕಣ್ಣೆತ್ತಿ ನೋಡುವುದಿಲ್ಲ'.

'ದೈನಂದಿನ ವ್ಯವಹಾರ: ನನ್ನ ಪತಿ ಮತ್ತು ಉಳಿದ ಸೇವಕರ ಊಟವಾಗದೇ ನಾನೆಂದೂ ಊಟಮಾಡುವುದಿಲ್ಲ ಅವರು ಮಲಗುವ ಮುಂಚೆ ನಾನೆಂದೂ ಮಲಗುವುದಿಲ್ಲ'.

'ಹೊಲದಿಂದಾಗಲೀ ಕಾಡಿನಿಂದಾಗಲೀ ಬಳಲಿ ಬಂದ ಪತಿಯನ್ನು ಎದ್ದು ನಮಸ್ಕರಿಸುತ್ತೇನೆ. ಅವರಿಗೆ ಕೂಡಲಿಕ್ಕೆ ಆಸನ ನೀರು ಇತ್ಯಾದಿಗಳನ್ನು ಕೊಟ್ಟು ಅವರ ಸ್ವಾಗತ ಸತ್ಕಾರದಲ್ಲಿ ಮಗ್ನಳಾಗುತ್ತೇನೆ. ಮನೆಯನ್ನು ಸ್ವಚ್ಛವಾಗಿಡುತ್ತೇನೆ. ಅಡಿಗೆಯನ್ನು ಶುದ್ಧವಾಗಿಡುತ್ತೇನೆ. ಎಲ್ಲರಿಗೂ ಸಮಯಕ್ಕೆ ಸರಿಯಾಗಿ ಊಟವಿಡುತ್ತೇನೆ. ಮನೆಯಲ್ಲಿರುವ ಅವಶ್ಯಕ ವಸ್ತುಗಳನ್ನು ಸುರಕ್ಷಿತವಾಗಿಡುತ್ತೇನೆ. ಮನೆಯನ್ನು ಕಸಗುಡಿಸಿ ಯಾವಾಗಲೂ ಸ್ವಚ್ಛವಾಗಿಯೂ ಇಡುತ್ತೇನೆ.'

'ಸ್ವಾಭಾವಿಕ ವ್ಯವಹಾರ: ನನ್ನ ಮಾತಿನಿಂದಾಗಲೀ ನಡತೆಯಿಂದಾಗಲೀ ಎಂದೂ ಯಾರನ್ನೂ ತಿರಸ್ಕಾರ ಮಾಡುವುದಿಲ್ಲ. ದುಷ್ಟ ಸ್ತ್ರೀಯರ ಸಂಪರ್ಕದಿಂದ ದೂರವಿರುತ್ತೇನೆ. ಆಲಸ್ಯವನ್ನು ಎಂದೂ ನನ್ನ ಹತ್ತಿರ ಸುಳಿಯುವುದಕ್ಕೂ ಬಿಡುವುದಿಲ್ಲ. ಪತಿಯ ಜೊತೆ ಹಾಸ – ಪರಿಹಾಸ ಬಿಟ್ಟು ಅನವಶ್ಯವಾಗಿ ಎಂದೂ ನಗುವುದಿಲ್ಲ. ಆಗಾಗ್ಗೆ ಮನೆಯ ಬಾಗಿಲ ಮುಂದೆ ನಿಲ್ಲುವುದಿಲ್ಲ'.

'ಮನೆಯ ಹತ್ತಿರವಿದ್ದರೂ ಹೂದೋಟ ಮೊದಲಾದವುಗಳಲ್ಲಿ ಸಾಮಾನ್ಯವಾಗಿ ಒಬ್ಬಳೇ ತಿರುಗಾಡುವದಿಲ್ಲ'.

'ನೀಚ ಪುರುಷರೊಂದಿಗೆ ಮಾತನಾಡುವದಿಲ್ಲ. ಯಾವಾಗಲೂ ಸಂತೋಷದಿಂದಿರುತ್ತೇನೆ. ಇನ್ನೊಬ್ಬರ ವಿಷಯದಲ್ಲಿ ತಲೆಹಾಕುವುದಿಲ್ಲ ಯಾವತ್ತೂ ಹೆಚ್ಚಿಗೆ ನಗುವುದಾಗಲೀ, ಸಿಟ್ಟು ಮಾಡಿಕೊಳ್ಳುವುದಾಗಲೀ ಮಾಡುವುದಿಲ್ಲ. ಪತಿಯನ್ನು ಬಿಟ್ಟು ಇರುವುದು ನನಗೆ ಎಳ್ಳಷ್ಟೂ ಇಷ್ಟವಿಲ್ಲ'.

'ಪತಿಯ ಪ್ರವಾಸದಲ್ಲಿ ಪತ್ನಿಯ ಕರ್ತವ್ಯ: ನನ್ನ ಪತಿಯು ಬೇರೆ ಊರಿಗೆ ಹೋದಾಗ ನಾನು ಹೂವುಗಳ ಅಲಂಕಾರವಾಗಲೀ ಇತರ ಹೆಚ್ಚಿನ ಅಲಂಕಾರವಾಗಲೀ ಮಾಡಿಕೊಳ್ಳುವುದಿಲ್ಲ. ವ್ರತ ನಿಯಮಗಳನ್ನು ಆಚರಿಸುತ್ತ ಸಂಯಮದಿಂದಿರುತ್ತೇನೆ. ಆಹಾರ, ವ್ಯವಹಾರ: ನನ್ನ ಪತಿಯು ಯಾವುದನ್ನು ತಿನ್ನುವುದಿಲ್ಲವೋ ಯಾವುದನ್ನು ಕುಡಿಯುವುದಿಲ್ಲವೋ ಅಥವಾ ಯಾವುದು ಅವರಿಗೆ ಸೇರುವುದಿಲ್ಲವೋ ಅಂತಹ ಎಲ್ಲಾ ವಸ್ತುಗಳನ್ನು ಪರಿತ್ಯಾಗಮಾಡುತ್ತೇನೆ'.

'ಶಾಸ್ತ್ರದಲ್ಲಿ ಯಾವರೀತಿ ಹೇಳಿದೆಯೋ ಅದೇ ರೀತಿ ಇರುವೆನು ಯಾವಾಗಲೂ ಸ್ವಾಭಾವಿಕ, ಅವಶ್ಯಕ ಭೂಷಣ ವಸ್ತ್ರಗಳಿಂದ ಅಲಂಕೃತಳಾಗಿ ಅವರ ಮನಸ್ಸಿಗೆ ಸಂತೋಷದಾಯಕಳಾಗುತ್ತ ಅವರ ಸೇವೆಯನ್ನು ಮಾಡುತ್ತೇನೆ'.

'ಪತಿಯ ಆಶ್ರಯದಲ್ಲಿಯೇ ಸ್ತ್ರೀಯು ಇರುವುದು ಸನಾತನ ಧರ್ಮವಾಗಿದೆ. ಏಕೆಂದರೆ ಪತಿಯೇ ಆಕೆಯ ದೇವರು, ಅವಳಗತಿ. ಪತಿಯನ್ನು ಬಿಟ್ಟು ಬೇರೆ ಯಾರೂ ಅವಳ ರಕ್ಷಕರು ಅಲ್ಲ. ಇಂತಹ ಪತಿಗೆ ಯಾವ ಸ್ತ್ರೀಯು ತಾನೆ ಅಪ್ರಿಯವನ್ನು ಬಯಸುವಳು ಮತ್ತು ಇಂತಹ ಪ್ರಿಯವನ್ನು ಬಯಸುವ ಪತ್ನಿಯನ್ನು ಯಾವ ಪತಿಯು ತಿರಸ್ಕರಿಸುವನು'.

'ನಾನು ಯಾವಾಗಲೂ ನನ್ನ ಮನಸ್ಸನ್ನು ನನ್ನ ನಿಯಂತ್ರಣದಲ್ಲಿಟ್ಟುಕೊಂಡು ನನ್ನ ಪತಿಗಳು ಮಾಡುವ ಪೂಜೆ, ದಾನ, ನೈವೇದ್ಯ, ವೈಶ್ವದೇವ, ಸ್ಥಾಲೀಪಾಕಯಜ್ಞ, ಗುರುಹಿರಿಯರ ಸೇವೆ, ನಿಯಮ – ಇತ್ಯಾದಿಗಳನ್ನು ಚೆನ್ನಾಗಿ ತಿಳಿದುಕೊಂಡು, ಅವರಿಗೆ ಅನುಕೂಲವಾದ ವ್ಯವ

ಹಾರ ಮಾಡುತ್ತ ಪ್ರಾತಃಕಾಲದಿಂದಲೂ ಅವರ ಸೇವೆಯಲ್ಲಿ ನಿರತಳಾಗಿರುತ್ತೇನೆ. . ಈ ಸೇವೆಯೇ ಅವರ ಪ್ರೀತಿಯನ್ನು ಗಳಿಸುವ ಮುಖ್ಯಸಾಧನ ವಾಗಿದೆ. ಈ ಪ್ರೀತಿಯೇ ಅವರನ್ನು ವಶದಲ್ಲಿಟ್ಟು ಕೊಳ್ಳುವ ದಿವ್ಯ ಮಂತ್ರವು'.

'ಪತಿಯ ಪ್ರಿಯಕರ ಕಾರ್ಯ. ಪತಿಯನ್ನು ಸಂತೋಷಪಡಿಸುವಂತೆ ಅವರ ಪ್ರೀತಿಗೆ ಪಾತ್ರ ರಾದ ಗುರುಹಿರಿಯರನ್ನು ಪರಿವಾರದವರನ್ನು ನನ್ನ ವ್ಯವಹಾರದಿಂದ ಸಂತೋಷಪಡಿಸಲು ಪ್ರಯತ್ನಿ ಸುವೆ, ವೀರಮಾತೆಯೂ, ಸತ್ಯವಾದಿನಿಯೂ, ಪೂಜ್ಯಳೂ, ಪೃಥ್ವಿಯ ಸಮಾನ ಕ್ಷಮಾಶೀಲಳೂ ಆದ ಕುಂತಿಯ ಸೇವೆಯಲ್ಲಿ ಯಾವಾಗಲೂ ನಿರತ ಳಾಗಿರುತ್ತೇನೆ'.

'ನಿತ್ಯವೂ ನಮ್ಮ ಮನೆಯಲ್ಲಿ ಎಂಟು ಸಾವಿರ ಬ್ರಾಹ್ಮಣರು ಬಂಗಾರದ ತಟ್ಟೆಯಲ್ಲಿ ಊಟ ಮಾಡುತ್ತಿದ್ದರು. ಎಂಬತ್ತೆಂಟು ಸಾವಿರ ಸ್ನಾತ ಕರು ನಮ್ಮನ್ನು ಆಶ್ರಯಿಸಿದ್ದರು. ಹತ್ತುಸಾವಿರ ಬ್ರಹ್ಮಚಾರಿ ಹಾಗೂ ಸಂನ್ಯಾಸಿಗಳು ನಮ್ಮಿಂದ ಪೋಷಿತರಾಗಿದ್ದರು. ಅವರೆಲ್ಲರ ಯೋಗಕ್ಷೇಮ ವನ್ನು ನಾನು ನನ್ನ ಪತಿಗಳಿಗೆ ಸಂತೋಷವಾಗು ವಂತೆ ನೋಡಿಕೊಳ್ಳುತ್ತಿದ್ದೆ'.

ಮನೆಯ ಪ್ರತಿಯೊಂದು ಕಾರ್ಯದಲ್ಲಿಯೂ ಲಕ್ಷ್ಯವಹಿಸುವಿಕೆ: ನಮ್ಮ ಅರಮನೆಯಲ್ಲಿ ಒಟ್ಟು ಒಂದು ಲಕ್ಷ ಸೇವಕ ಸೇವಕಿಯರು ಇದ್ದರು. ಆದರೂ ಅವರೆಲ್ಲರ ಹೆಸರು, ಅವರ ಮುಖಚರ್ಯೆ, ಅವರ ಮಾತು, ವ್ಯವಹಾರ ಇವೆಲ್ಲವುಗಳ ಸರಿ ಯಾದ ಜ್ಞಾನ ನನಗೆ ಇತ್ತು. ಅವರು ಮಾಡಿದ ಮತ್ತು ಮಾಡದ ಕಾರ್ಯಗಳು ನನಗೆ ಗೊತ್ತಾ ಗದೆ ಹೋಗುತ್ತಿರಲಿಲ್ಲ. ನನ್ನ ಪತಿಗಳ ಪ್ರತಿ ಯೊಂದು ಪ್ರವಾಸದಲ್ಲಿ ಲಕ್ಷಾವಧಿ ಆನೆ, ಕುದುರೆ, ರಥ, ಆಯುಧ, ಆಹಾರ, ಸೇವಕರೂ ಇತ್ಯಾದಿ ಗಳ ವ್ಯವಸ್ಥೆಯನ್ನು ಸ್ವಯಂ ನಾನೇ ನಿಂತು ನೋಡಿಕೊಳ್ಳುತ್ತಿದ್ದೆ. ಇದು ನನ್ನ ನಿಶ್ಚಿತ ಕೆಲಸ ವಾಗಿತ್ತು'.

ಹಣದ ವ್ಯವಹಾರ: ನನ್ನ ಪತಿಗಳು ಗೃಹಿಣಿ ಯಾದ ನನಗೆ ಹಣಕಾಸಿನ ಮಂತ್ರಿಯಾಗಿ ನಿಯ ಮಿಸಿದ್ದುದರಿಂದ ಮನೆಯ ಮತ್ತು ರಾಜ್ಯದ, ಆಯ, ವ್ಯಯ ಮತ್ತು ಉಳಿತಾಯವಾಗುತ್ತಿದ್ದ ಎಲ್ಲದರ ವ್ಯವಹಾರವನ್ನು ನಾನೊಬ್ಬಳೇ ನೋಡಿ ಕೊಳ್ಳುತ್ತಿದೆ'.

'ಸತ್ಯಭಾಮೆ, ಇದೆಲ್ಲಾ, ದೊಡ್ಡಸ್ತಿಕೆ ಹೇಳಿ ಕೊಳ್ಳಲು ಹೇಳಲಿಲ್ಲ. ಹೊರತು ಪ್ರಜೆಗಳ ಸಂಪರ್ಕ ಕಾರ್ಯದಲ್ಲಿ ಆಸಕ್ತರಾದ ಅವರ ಜವಾ ಬ್ದಾರಿ ಹಾಗೂ ಭಾರವನ್ನು ಕಡಿಮೆ ಮಾಡಲು ನಾನು ಈ ಕಾರ್ಯವನ್ನು ವಹಿಸಿಕೊಂಡಿದ್ದೇನೆ. ಇದು ಒಬ್ಬ ಗೃಹಿಣಿಯ ಕರ್ತವ್ಯವಲ್ಲವೇ?'

'ಈ ರೀತಿಯಾಗಿ ಕಷ್ಟಕರವಾದ ಆ ಕಾರ್ಯ ವನ್ನು ನಾನು ನನ್ನ ಸುಖ ಭೋಗಗಳನ್ನು ತ್ಯಜಿಸಿ, ಹಗಲು ರಾತ್ರಿ ಆ ಭಾರವನ್ನು ಸರಿಯಾಗಿ ನಿರ್ವ ಹಿಸುತ್ತಿದ್ದೇನೆ'.

'ಧರ್ಮದ ಪೂರ್ಣ ಆಚರಣೆ ಮಾಡುವ ನನ್ನ ಪತಿಗಳ ಕೋಶಾಗಾರವು ವಿವಿಧ ಸಂಪತ್ತು ಹಾಗೂ ರತ್ನಗಳಿಂದ ತುಂಬಿ ಪರಿಪೂರ್ಣವಾದ ಸಮುದ್ರದಂತೆ ಅಕ್ಷಯವಾಗಿತ್ತು. ಆದರೆ ಸರಿ ಯಾದ ಲೆಕ್ಕ ನನಗೆ ಗೊತ್ತಿತ್ತು'.

'ಇಂತಹ ಪತಿಭಕ್ತಿ ಮತ್ತು ಸೇವೆಯೇ ಅವ ರನ್ನು ವಶೀಕರಿಸುವ ಮಂತ್ರವಲ್ಲವೇ? ಇದೇ ನನಗೆ ಗೊತ್ತಿರುವ ಮಂತ್ರಗಳಾಗಿವೆ'. ಇದನ್ನು ಕೇಳಿ ಕೃಷ್ಣನ ಪತ್ನಿಯಾದ ಸತ್ಯಭಾಮೆಯು – 'ದ್ರೌಪದಿ ನಿನ್ನ ಮುಖದಿಂದ ಮಹಾನ್ ಪತಿವ್ರ ತಾಧರ್ಮವನ್ನು ಹೊರಡಿಸಬೇಕೆಂಬ ಉದ್ದೇಶ ದಿಂದಲೇ ಈ ರೀತಿ ಪ್ರಶ್ನೆಯನ್ನು ಮಾಡಿದೆ. ನಾನೇನೂ ಮೊದಲು ಹೇಳಿದಂತೆ ಮಾಟ, ಮಂತ್ರ, ಔಷಧಿಗಳಲ್ಲಿ ವಿಶ್ವಾಸವಿಡುವುದಿಲ್ಲ. ಏಕೆಂದರೆ ನಿನ್ನ ಅಣ್ಣನಾದ ಕೃಷ್ಣನ ಸಂಪೂರ್ಣ ಅನುಗ್ರಹ ಹಾಗೂ ಪ್ರೀತಿಗೆ ಪಾತ್ರಳಾದ ನಿನಗೆ ಅವುಗಳ ಅವಶ್ಯಕತೆ ಇಲ್ಲ'.

ಇವರಿಬ್ಬರ ಸಂವಾದವನ್ನು ಕೇಳುತ್ತಿದ್ದ ಅಲ್ಲಿದ್ದ ಮುನಿಪತ್ನಿಯರು ಇಂದು ಶ್ರೇಷ್ಠ ಜ್ಞಾನವನ್ನು ಪಡೆದು ಧನ್ಯರಾದೆವೆಂದು ಆನಂದಾಶ್ರುಗಳನ್ನು ಹರಿಸಿದರು. ★

ಕಿಶೋರಜಗತ್

# ಮಾತನಾಡುವ ಮೈನ ಹಕ್ಕಿ

ಕಾಂಪಿಲ್ಯನಗರದ ರಾಜಭವನದಲ್ಲಿ ಸಡಗರವೋ ಸಡಗರ. ಜನ ಗುಂಪು ಗುಂಪಾಗಿ ಅರಮನೆಗೆ ದಾವಿಸಿ ಬರುತ್ತಿದ್ದಾರೆ. ಎಲ್ಲರೂ ಆಶ್ಚರ್ಯ ಚಕಿತರಾಗಿ ಬರುತ್ತಿದ್ದಾರೆ. ಮಹಾರಾಜ ಬ್ರಹ್ಮದತ್ತ ಒಂದು ಮೈನಹಕ್ಕಿ ತಂದಿದ್ದಾನೆ. ಅದು ಲೋಕದಲ್ಲೇ ಅತಿವಸ್ತು. ಅದಕ್ಕೆ ತಿಳಿಯದ ವಿಷಯವೇ ಇಲ್ಲ. ಮಧುರವಾಗಿ ಮಾತಾಡುತ್ತದೆ, ಎಲ್ಲರ ಕ್ಷೇಮ ಸಮಾಚಾರ ಕೇಳುತ್ತದೆ, ಯಾರೇನು ಪ್ರಶ್ನೆ ಕೇಳಿದರೂ ಸೂಕ್ತವಾದ ಉತ್ತರ ಹೇಳುತ್ತದೆ. ಅಂದವಾದ ಪಕ್ಷಿ ಚೆಂದವಾಗಿ ಮಾತಾಡುತ್ತದೆ ಎಂದಾಗ ಅದರ ಮುದ್ದು ಮಾತು ಕೇಳಲು ಎಲ್ಲರಿಗೂ ಆಸೆ. ಆ ಹೊತ್ತು ಒಂದು ವಿಶೇಷ. ಮೈನಹಕ್ಕಿ ಮರಿ ಹಾಕಿದೆ, ಅದೇ ದಿನ ಮಹಾರಾಜನಿಗೆ ಪುತ್ರೋತ್ಸವವೂ ಆಗಿದೆ. ಜನ, ಸಡಗರದಿಂದ ಬಂದು ನೋಡಿ ಹೋದರು. ಅರಮನೆಯಲ್ಲಿ ಈ ಹಕ್ಕಿಯನ್ನು ಕಂಡರೆ ತುಂಬ ಅಸ್ಥೆ, ಅಕ್ಕರೆ. ಅದಕ್ಕೆ ಅರಮನೆಯಲ್ಲಿ ಸರ್ವಸ್ವಾತಂತ್ರವುಂಟು. ಅದರ ಹೆಸರು ಪೂಜನಿ. ಈ ಹಕ್ಕಿ ಪ್ರತಿದಿನ ಎರಡುಹಣ್ಣು ತರುತ್ತದೆ. ಒಂದು ತನ್ನ ಮರಿಗೆ, ಇನ್ನೊಂದು ರಾಜಕುಮಾರನಿಗೆ. ಇದು ಕೆಲಕಾಲ ನಡೆದು ಬಂದು ಪದ್ಧತಿಯಾಯಿತು. ಪೂಜನಿಗೆ ಕಾಂಪಿಲ್ಯ ರಾಜಕುಮಾರನನ್ನು ಕಂಡರೆ ಏನೋ ಪ್ರೀತಿ, ಯಾವುದೋ ಜನ್ಮದ ಮೈತ್ರಿ!!

ಒಂದು ದಿನ ದಾದಿಯೊಬ್ಬಳು ರಾಜಕುಮಾರನನ್ನೆತ್ತಿಕೊಂಡು ಬಂದು ಅವನಿಗೆ ಮೈನಮರಿಯನ್ನು ತೋರಿಸುತ್ತ – ನೀವಿಬ್ಬರೂ ಒಂದೇ ದಿನ ಹುಟ್ಟಿದವರು ಎಂದು ನಗುತ್ತ ನುಡಿದಳು. ಸಹಜ ಕುತೂಹಲದಿಂದ ಬಾಲಕ ಹಕ್ಕಿಯೊಡನೆ ಆಡಿಕೊಳ್ಳಲಾರಂಭಿಸಿದ. ದಾದಿ ಯಾರೋ ಕರೆದ ದನಿ ಕೇಳಿ ಮಗವನ್ನು ಅಲ್ಲೇಬಿಟ್ಟು ಹೊರಟು ಹೋದಳು. ಎಳೇಮಕ್ಕಳಿಗೆ ಬುದ್ಧಿ ಬೆಳೆದಿರುವುದಿಲ್ಲ; ವಿವೇಚನೆ ಇರುವುದಿಲ್ಲ. ರಾಜಕುಮಾರ ಹುಡುಗಾಟಕ್ಕಾಗಿ ಪಕ್ಷಿಯ ಒಂದೊಂದೇ ರೆಕ್ಕೆಯನ್ನು ಕೀಳಲಾರಂಭಿಸಿದ; ಕಣ್ಣನ್ನು ಚುಚ್ಚಿದ' ಕೊನೆಗದು ಸತ್ತೇಹೋಯ್ತು. ಪದ್ಧತಿಯಂತೆ ಹಣ್ಣು ತಂದ ಮೈನ ತನ್ನ ಮರಿಯ ಸಾವು ಕಂಡು ಗಳಗಳ ಅಳುತ್ತ ಹೇಳಿತು.–

“ಸ್ನೇಹ ಭಾವವನ್ನು ದೀರ್ಘಕಾಲ ಉಳಿಸಿ ಬೆಳೆಸಿಕೊಳ್ಳುವುದು ಮಾನವರಿಗೆ ಗೊತ್ತೇ ಇಲ್ಲ. ಸ್ನೇಹ, ವಿಶ್ವಾಸ–ಪ್ರೀತಿ–ಸೌಂದರ್ಯ ಮುಂತಾದ ಕೋಮಲ ಕಾಂತ ಭಾವನೆಗಳು ಹಿಂಸಾಪ್ರಿಯವಾದ ಸ್ವಾರ್ಥ ಜಾತಿಗೆ ಹೇಗೆ ತಾನೆ ಗೊತ್ತಾಗಬೇಕು. ಯಾರನ್ನೂ ನಂಬಬಾರದು ಎಂದು ಈ ಕ್ಷತ್ರಿಯರಿಗೆ ಬಹುಶಃ ಹುಟ್ಟುವಾಗಲೇ ತಿಳಿದಿರುತ್ತದೆಂದು ಕಾಣುತ್ತದೆ, ಹಿಂಸೆ ಮಾಡಲು ಹಿಂದು ಮುಂದು ನೋಡದ ಈ ಜನ ಬೂಟಾಟಿಕೆಯ ಮಾತಾಡುವುದರಲ್ಲಿ ತುಂಬ ಪ್ರವೀಣರು.”

ಪೂಜನಿಗೆ ತುಂಬ ಸಂಕಟವಾಗಿತ್ತು. ಆದ್ದರಿಂದಲೇ ಅದರ ಮಾತು ತುಂಬ ಬಿಸಿಯಾಗಿತ್ತು–ವ್ಯಂಗ್ಯವಾಗಿತ್ತು, ಅಷ್ಟರಲ್ಲಿ ದಾದಿ ಅಲ್ಲಿಗೆ ಬಂದಳು. ಏನೂ ಅರಿಯದ ಮಗು ಕಿಸಿಕಿಸಿ ನಗುತ್ತಿತ್ತು. ಅಷ್ಟರಲ್ಲಿ ಪೂಜನಿಗೇನು ತೋಚಿತೋ–ರಾಜಕುಮಾರನ ಎರಡೂ ಕಣ್ಣುಗಳನ್ನು ಕೊಕ್ಕಿನಿಂದ ಕುಕ್ಕಿ ಸರ್ರನೆ ಹಾರಿ ಹೋಯ್ತು.

ಮಿಂಚಿನಂತೆ ನಡೆದುಹೋದ ಈ ಘಟನೆಯಿಂದ ಅರಮನೆಯ ಜನ ದಿಗ್ಭ್ರಾಂತರಾದರು. ಹಾಹಾಕಾರದ ಗೋಳು ಪ್ರಾರಂಭವಾಯ್ತು. ಮಗವಿನ ಕಣ್ಣುಗಳು ಹಾಳಾದ ಸುದ್ದಿ ಮಹಾರಾಜ ಬ್ರಹ್ಮದತ್ತನಿಗೂ ತಿಳಿಯಿತು. ಬಂದು ನೋಡಿದ. ಮಗುವಿನ ಕಣ್ಣುಗಳು ಹೋಗಿವೆ–ರಕ್ತಧಾರೆ ಸುರಿಯುತ್ತಿದೆ. ಮಹಾರಾಣಿ ಗೋಳಾಡುತ್ತಿದ್ದಾಳೆ. ಬಾಧೆ ಪಡುತ್ತಿದ್ದ ಮಗುವಿನ ಗೋಳು ಹೇಳತೀರದು.

ಮಹಾರಾಜ ಗಂಭೀರವಾಗಿ ಹೇಳಿದ– “ಪೂಜನಿ ಸೇಡು ತೀರಿಸಿಕೊಂಡಿದೆ. ಹಿಂಸೆಗೆ ಪ್ರತಿಹಿಂಸೆಯಾಗಿದೆ. ಇದು ಸರಿಯಲ್ಲವೆಂದು ಹೇಳಲು ಸಾಧ್ಯವಿಲ್ಲ. ನಿರಪರಾಧಿಗೆ ಹಿಂಸೆಯಾಗಬಾರದು. ಅಪರಾಧಿಗೆ ಶಿಕ್ಷೆ ಆಗದೇ ಇರಲೂಬಾರದು. ಎಲ್ಲ ದೈವೇಚ್ಛೆ.”

ಬ್ರಹ್ಮದತ್ತನ ಧ್ವನಿ ಕೇಳಿ ಪೂಜನಿ ಹಾರಿಬಂತು. ಮಹಾರಾಜ ದುರುಗುಟ್ಟುತ್ತ ನೋಡಿದ, ಆದರೆ ಅನುನಯದ ವಾಣಿಯಲ್ಲಿ ಹೇಳಿದ–

“ಪೂಜನಿ–ನಿನ್ನ ಸಂಕಟ ನಾನು ಬಲ್ಲೆ. ನನ್ನ ಸಂಕಟ ನೀನೂ ಬಲ್ಲೆ, ನಾವು ಪರಸ್ಪರ ಸಮಾಧಾನ ಹೇಳಿಕೊಳ್ಳೋಣ. ನಿನ್ನ ಮರಿ ಸತ್ತುಹೋಯ್ತೆಂದು ನೀನು ಅರಮನೆ ಬಿಟ್ಟು ಹಾರಿಹೋಗಬಾರದು. ಇದು ರಾಜಾಜ್ಞೆಯಲ್ಲ–ಬ್ರಹ್ಮದತ್ತನ ಪ್ರಾರ್ಥನೆ.”

“ಮಹಾರಾಜ, ನಿನ್ನ ವಿಶ್ವಾಸದ ಮಾತು ಕೇಳಿ ನಾನು ತುಂಬ ಸಂತೋಷ ಪಡುತ್ತೇನೆ. ಆದರೆ.........ಒಂದುಸಲ ಒಬ್ಬರಿಗೆ ಹಿಂಸೆಮಾಡಿ ಪುನಃ ಅವರ ಆಶ್ರಯದಲ್ಲೇ ಬಾಳುವುದು 'ಕ್ಷೇಮಕರವಲ್ಲವೆಂದು ಹಿರಿಯರಾಡುವುದನ್ನು ಕೇಳಿದ್ದೇನೆ. ಪರಸ್ಪರ



ವಿದ್ವಾನ್ ಬ. ನ. ಗುಂಡೂರಾವ್



ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೇಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

ವೈರ ಬೆಳೆದ ಮೇಲೆ ಯಾರೆಷ್ಟು ಮಧುರವಾಗಿ ಮಾತಾಡಿದರೂ ನಂಬಬಾರದು. ಏಕೆಂದರೆ ಅದು ಶುದ್ಧ ವಿಶ್ವಾಸದ ಮಾತಾಗಿರುವುದಿಲ್ಲ. ದ್ವೇಷದ ಲಕ್ಷಣವೇ ಹಾಗೆ. ಒಂದು ಸಲ ಅದು ಪ್ರಾರಂಭವಾಯ್ತೆಂದರೆ ಕೆಲವು ಸಂದರ್ಭಗಳಲ್ಲಿ ಪೀಳಿಗೆಯಿಂದ ಪೀಳಿಗೆಗೆ ಅದು ಮುಂದುವರಿಯುತ್ತ ಹೋಗುತ್ತದೆ. ಯಾರಿಬ್ಬರಲ್ಲಿ ದ್ವೇಷ ಬೆಳೆಯುತ್ತದೆ ಅವರಿಬ್ಬರಿಗೂ ಕ್ಷೇಮಕರವಾದ ಒಂದೇ ಒಂದು ಮಾರ್ಗವೆಂದರೆ ದೂರದೂರವಿರುವುದು. ಇತರರು ಬೇಕಾದರೆ ನಮ್ಮನ್ನು ನಂಬಲಿ, ನಾವು ಮಾತ್ರ ಯಾರನ್ನೂ ನಂಬಬಾರದು–''

ಪೂಜನಿ ಸ್ಪಷ್ಟವಾಗಿ ಹೇಳಿತು.

"ಪರಸ್ಪರ ದ್ವೇಷ ತೀರಿಸಿಕೊಂಡ ಮೇಲೆ ಇನ್ನು ದ್ವೇಷವೆಲ್ಲಿ ಉಳಿದಿರುತ್ತದೆ? ಅಲ್ಲಿಗೆ ವೈರಭಾವ ಶಾಂತವಾಯ್ತಲ್ಲವೇ?

ಮಹಾರಾಜ ಕೇಳಿದ.

"ಇಲ್ಲ ಮಹಾಪ್ರಭು, ವೈರಭಾವ ಶಾಂತವಾಗುವುದೇ ಇಲ್ಲ. ಬಲವಾದ ಶಸ್ತ್ರಾಸ್ತ್ರಗಳಿಗೂ ಬಗ್ಗದವರನ್ನು–ಮಧುರವಾದ ಮಾತಿನಿಂದ ವಶಪಡಿಸಿಕೊಳ್ಳಬಹುದೆಂಬುದನ್ನು ರಾಜನೀತಿ ಧುರೀಣರಾದ ನಿಮಗೆ ನಾನು ತಿಳಿಸಬೇಕೇನು?

ಹಕ್ಕಿಯ ಮಾತಿನಲ್ಲಿ ವ್ಯಂಗ್ಯವಿತ್ತು.

"ಅದಿರಲಿ; ಅತ್ಯಂತ ಕ್ರೂರಿಗಳೇ ಆದರೂ ಸದಾಸಮೀಪದಲ್ಲಿ ಬಾಳುವುದರಿಂದ ಅವರಲ್ಲಿ ಸ್ನೇಹ ಪ್ರೀತಿಯುಂಟಾಗಲು ಬೆಳೆಯಲು ಸಾಕಷ್ಟು ಅವಕಾಶವಿರಬಹುದಲ್ಲವೆ? ಕಟುಕನ ಮನೆಯಲ್ಲಿರುವ ನಾಯಿ ಅವನನ್ನು ಪ್ರೀತಿಸದೇ ಇರುತ್ತದೆಯೇ? ನೀನೇನು ಹೀಗೆ ವಿಚಿತ್ರವಾಗಿ ಮಾತಾಡುತ್ತಿದ್ದಿ ಪೂಜನಿ?''

"ಮಹಾರಾಜ! ದ್ವೇಷ ಬೆಳೆಯುವುದಕ್ಕೆ ಸಾಮಾನ್ಯವಾಗಿ ಐದು ಕಾರಣಗಳಿರುತ್ತವೆಂದು ಹಿರಿಯರು ಹೇಳುತ್ತಾರೆ–ಹೆಣ್ಣಿಗಾಗಿ, ಆಸ್ತಿಪಾಸ್ತಿಗಾಗಿ, ಕಠಿನವಾದ ಮಾತಿನಿಂದ, ಜಾತಿಮತಗಳ ಕಾರಣದಿಂದ ಎಂದೋ ಮಾಡಿದ ತೊಂದರೆಯಿಂದ. ಆದರೆ ದುರ್ಬಲನಾದವನ ಮೇಲೆ ಸವಾರಿ ಮಾಡುವರು, ಅಧಿಕಾರಿಗಳು ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಬಹುದು. ಇದುವರೆಗೆ ನನ್ನಿಂದ ನಿಮಗಾಗಲೀ, ನಿಮ್ಮಿಂದ ನನಗಾಗಲೀ ಏನೂ ತೊಂದರೆಯಾಗಿರಲಿಲ್ಲ–ಸರಿ ಹೋಯ್ತು. ಇನ್ನು ಮುಂದೆ ಹಾಗಲ್ಲ, ಪರಿಸ್ಥಿತಿ ಬದಲಾಯಿಸಿದೆ."

ಪೂಜನಿ ರೆಕ್ಕೆ ಕೊಡವುತ್ತ ಹೇಳಿತು.

"ಪರಿಸ್ಥಿತಿ ಬದಲಾಯಿಸಿದೆಯೇ? ಬದಲಾಯಿಸುವುದೇ ಅದರ ಲಕ್ಷಣ. ಹಾಗೆ ನೋಡಿದರೆ ಅಪರಾಧಗಳಿಗೂ ಪರಿಸ್ಥಿತಿಗಳೇ ಕಾರಣ ವ್ಯಕ್ತಿಗಳಲ್ಲ. ಪೂಜನಿ–ಹಳೆಯ ಕಥೆ ಇಲ್ಲಿಗೆ ಬಿಡೋಣ. ನಮ್ಮಿಂದ ನಿನಗೆ ಯಾವ ರೀತಿಯ ಭಯವೂ ಇರುವುದಿಲ್ಲ. ನನ್ನ ಪ್ರಾರ್ಥನೆ ಮನ್ನಿಸಿ ಅರಮನೆಯಲ್ಲೇ ಇರು ಪೂಜನಿ."

ಬ್ರಹ್ಮದತ್ತನ ಮಾತಿನಲ್ಲಿ ವಿನಯ ತುಂಬಿತ್ತು.

"ಮಹಾಪ್ರಭುಗಳು ಮನ್ನಿಸಬೇಕು. ಮನುಷ್ಯರು ಏನೇ ಕೆಲಸ ಮಾಡಿದರೂ ಅದರಲ್ಲಿ ಸ್ವಾರ್ಥದ ಅಂಶವಿದ್ದೇ ಇರುತ್ತದೆ. ಅವರು ಪ್ರಾಣಿಗಳನ್ನೋ–ನನ್ನಂಥ ಪಕ್ಷಿಗಳನ್ನೋ ಸಾಕುತ್ತಾರೆ, ನಿಜ. ಏಕೆ ಗೊತ್ತೇ? ತಮ್ಮ ಆಟಕ್ಕಾಗಿ ಅಥವ ಆಹಾರಕ್ಕಾಗಿ. ಇದರ ವಿನಃ ಮೂರನೇ ಉದ್ದೇಶ ಸಾಮಾನ್ಯವಾಗಿರುವುದಿಲ್ಲವೆಂದು ನನಗೆ ಭಾಸವಾಗುತ್ತದೆ. ಎಲ್ಲರಿಗೂ ಪ್ರಾಣ-ಪ್ರಿಯವಸ್ತುವಲ್ಲವೇ? ತನ್ನ ಪುತ್ರ ನೇತ್ರಕ್ಕಿಂತ ಹೆಚ್ಚು ಪ್ರಿಯವಾಗಿರುತ್ತದೆ. [illegible] ಎಲ್ಲ ಜೀವಿಗಳೂ [illegible] ವ್ಯಗ್ರಗೊಳ್ಳುತ್ತವೆ. ಸುಖಾಭಿಲಾಷೆ ಎಲ್ಲ ಜೀವಿಗಳಲ್ಲೂ ಸಹಜವಾಗಿರುತ್ತದೆ. ನನ್ನ ಮರಿಯ ನೆನಪು ನನಗೆ ಬಂದಾಗಲೆಲ್ಲ ನಿಮ್ಮ ಬಗ್ಗೆ ದ್ವೇಷ ತಲೆಯೆತ್ತಬಹುದು. ಕುರುಡನಾದ ಮಗನನ್ನು ಕಂಡಾಗಲೆಲ್ಲ ನನ್ನ ವಿಷಯದಲ್ಲಿ ನಿಮಗೂ ದ್ವೇಷ ಬರಬಹುದು. ನನ್ನ ಮಾತು ಸುಳ್ಳೆನ್ನುತ್ತೀರೇನು ಮಹಾರಾಜ?

ಸಾಮ್ರಾಟ ಬ್ರಹ್ಮದತ್ತ ಪಿಳಿಪಿಳಿ ನೋಡುತ್ತಿದ್ದ. ಈ ಹಕ್ಕಿಯ ಅಪಾರ ಅನುಭವಕ್ಕೆ ಬೆರಗಾಗಿ ಹೋದ. ಪೂಜನಿ ಹೇಳಿತು.

"ಹಿರಿಯರು ಏನು ಹೇಳುತ್ತಾರೆ ಗೊತ್ತೇ ಮಹಾರಾಜ? ದುಷ್ಟಹೆಂಡತಿ, ಕೆಟ್ಟಮಕ್ಕಳು, ಕುಟಿಲಸ್ವಭಾವದ ಅಧಿಕಾರಿಗಳು ಅವಿವೇಕಿ ಮಿತ್ರರು, ಇಂಗಿತಜ್ಞಾನವಿಲ್ಲದ ಬಂಧುಗಳು–ಅನಾಯಕ ಅಥವ ಬಹುನಾಯಕವಾದ ರಾಜ್ಯ... .....ಇವನ್ನೆಲ್ಲ ಬಿಟ್ಟು ದೂರ ಇರುವುದು ಕ್ಷೇಮ" ಎನ್ನುತ್ತಾರೆ.

ಮಹಾರಾಜ ನಾನಾ ಬಗೆಯಲ್ಲಿ ಸಮಾಧಾನ ಹೇಳಿದ. ಆದರೇನು-ಮಾತಾಡುವ ಮೈನ ಹಕ್ಕಿ – ಇನು ಮಾತುಬೇಕಿಲ್ಲವೆಂದು ಹೇಳಿ ತನಗಿಷ್ಟಬಂದ ಕಡೆಗೆ ಹಾರಿ ಹೋಯ್ತು.

---

ಯಥಾ ಪುಷ್ಕರ ಪರ್ಣೇಷು
ಪತಿತಾಸ್ತೋಯ ಬಿಂದವಃ
ನಶ್ಲೇಷಮುಪಗಚ್ಛಂತಿ
ತಥಾನಾರ್ಯೇಷು ಸಂಗತಮ್. (ರಾಮಾಯಣ)

ತಾವರೆಯ ಎಲೆಯ ಮೇಲೆ ಬಿದ್ದ ಜಲಬಿಂದುವು ಹೇಗೆ ಎಲೆಗೆ ಅಂಟಿಕೊಳ್ಳುವುದಿಲ್ಲವೋ, ಕೆಟ್ಟವರೊಂದಿಗಿನ ಮೈತ್ರಿಯೂ ಹಾಗೆಯೇ ಸಜ್ಜನರಿಗೆ ಅಂಟಿಯೂ ಅಂಟದಂತೆ ಇರಬೇಕು.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು,

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10-30 ರಿಂದ 1-00 ಗಂಟೆಯವರೆಗೆ ಕೆಲಸಮಾಡುತ್ತದೆ.

( ೩ನೇ ಪುಟದಿಂದ )

ಯಾವ ಭಕ್ತನು ಯಾವ ದೇವತೆಯನ್ನು ನಂಬಿ ಪೂಜಿಸಬಯಸುವನೋ ಅವನಿಗೆ ನಾನು ಆಯಾ ದೇವತೆಯ ಮೇಲಿನ ನಂಬಿಕೆಯನ್ನು ನೆಲೆಗೊಳಿಸುವೆನು.

ಸ ತಯಾ ಶ್ರದ್ಧಯಾ ಯುಕ್ತಃ
ತಸ್ಯಾऽರಾಧನಮೀಹತೇ ।
ಲಭತೇ ಚ ತತಃ ಕಾಮಾನ್
ಮಯೈವ ವಿಹಿತಾನ್ಹಿ ತಾನ್ ॥ 22

ಅವನು ಆ ನಂಬಿಕೆಯಿಂದ ಕೂಡಿ ಆ ದೇವತೆಯ ಪೂಜೆಯನ್ನು ಮಾಡುತ್ತಾನೆ; ನಾನೇ ಗೊತ್ತು ಮಾಡಿರುವಂತೆ ಆ ದೇವತೆಯಿಂದ ಫಲಗಳನ್ನೂ ಪಡೆಯುತ್ತಾನೆ.

ಅಂತವತ್ತು ಫಲಂ ತೇಷಾಂ
ತದ್ಭವತ್ಯಲ್ಪಮೇಧಸಾಮ್ ।
ದೇವಾನ್ದೇವಯಜೋ ಯಾಂತಿ
ಮದ್ಭಕ್ತಾ ಯಾಂತಿ ಮಾಮಪಿ ॥ 23

ದಡ್ಡರಾದ ಅವರಿಗೆ ದೊರೆಯುವ ಫಲಮಾತ್ರ ಕ್ಷಣಿಕವಾದದ್ದು. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಪಡೆಯುತ್ತಾರೆ. ನನ್ನ ಭಕ್ತರು ನನ್ನನ್ನು ಪಡೆಯುತ್ತಾರೆ.

ಅವ್ಯಕ್ತಂ ವ್ಯಕ್ತಿಮಾಪನ್ನಂ
ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ
ಮಮಾವ್ಯಯಮನುತ್ತಮಮ್ ॥ 24

ನಾಶವಿರದ ಹಿರಿದಾದ ನನ್ನ ನಿಜತತ್ತ್ವವನ್ನು ತಿಳಿಯದ ಅವಿವೇಕಿಗಳು ಅಪ್ರಾಕೃತಸ್ವರೂಪನಾದ ನನ್ನನ್ನು ಹುಟ್ಟು ಸಾವುಗಳಿಗೆ ಪಕ್ಕಾದ ಜಡದೇಹಿ ಎಂದು ತಿಳಿಯುತ್ತಾರೆ.

ನಾಹಂ ಪ್ರಕಾಶಃ ಸರ್ವಸ್ಯ
ಯೋಗಮಾಯಾಸಮಾವೃತಃ ।
ಮೂಢೋऽಯಂ ನಾಭಿಜಾನಾತಿ
ಲೋಕೋ ಮಾಮಜಮವ್ಯಯಮ್ ॥ 25

ನಿಜಸಾಮರ್ಥ್ಯದಿಂದ ಮತ್ತು ಮಾಯೆಯಿಂದ ಮರೆಯಾಗಿ ನಿಂತಿರುವ ನಾನು ಎಲ್ಲರಿಗೂ ಕಾಣಬರುವವನಲ್ಲ. ದಡ್ಡರಾದ ಈ ಜಗತ್ತಿನ ಜನರು ಹುಟ್ಟುಸಾವುಗಳಿಲ್ಲದ ನನ್ನನ್ನು ತಿಳಿಯಲಾರರು.

ವೇದಾಹಂ ಸಮತೀತಾನಿ
ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ
ಮಾಂ ತು ವೇದ ನ ಕಶ್ಚನ ॥ 26

ಅರ್ಜುನ, ಹಿಂದಿನ, ಈಗಿನ, ಮುಂದಿನ ಎಲ್ಲಾ ಪ್ರಾಣಿಗಳನ್ನೂ ನಾನು ತಿಳಿದಿದ್ದೇನೆ. ನನ್ನನ್ನಾದರೋ ಯಾರೂ ಅರಿಯರು.

ಇಚ್ಛಾದ್ವೇಷಸಮುತ್ಥೇನ
ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಮ್ಮೋಹಂ
ಸರ್ಗೇ ಯಾಂತಿ ಪರಂತಪ ॥ 27

ಅರ್ಜುನ, ಬೇಕು ಬೇಡ ಎಂಬ ಭಾವನೆಗಳಿಂದ ಹುಟ್ಟುವಂಥ ಸುಖ ದುಃಖ ಮೊದಲಾದ ದ್ವಂದ್ವದ ಆವೇಶಕ್ಕೊಳಗಾಗಿ ಎಲ್ಲ ಪ್ರಾಣಿಗಳೂ ಸೃಷ್ಟಿಯ ಆರಂಭದಿಂದಲೇ ಅಜ್ಞಾನದ ಸುಳಿಯಲ್ಲಿ ಬೀಳುತ್ತವೆ.

ಯೇಷಾಂ ತ್ವಂತಗತಂ ಪಾಪಂ
ಜನಾನಾಂ ಪುಣ್ಯಕರ್ಮಣಾಮ್ ।
ತೇ ದ್ವಂದ್ವಮೋಹನಿರ್ಮುಕ್ತಾ
ಭಜಂತೇ ಮಾಂ ದೃಢವ್ರತಾಃ ॥ 28

ಒಳ್ಳೇ ಕರ್ಮಗಳನ್ನು ಮಾಡುತ್ತಿರುವ ಯಾವ ಜನರ ಪಾಪಗಳೆಲ್ಲ ಕೊನೆಗೊಂಡಿರುವುವೋ ಅವರು ಆ ದ್ವಂದ್ವದ ಆವೇಶದಿಂದ ಬಿಡುಗಡೆ ಹೊಂದಿ ಕಟ್ಟುನಿಟ್ಟಾದ ವ್ರತವನ್ನು ಹಿಡಿದು ನನ್ನನ್ನು ಭಜಿಸುತ್ತಾರೆ.

ಜರಾಮರಣಮೋಕ್ಷಾಯ
ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ
ಅಧ್ಯಾತ್ಮಂ ಕರ್ಮ ಚಾಖಿಲಮ್ ॥ 29

ಯಾರು ನನಗೆ ಶರಣು ಬಂದು ಮುಪ್ಪು–ಸಾವುಗಳಿಂದ ಪಾರಾಗಬೇಕೆಂದು ಯತ್ನಿಸುವರೋ ಅವರು ಆ ಪರಬ್ರಹ್ಮ ಸ್ವರೂಪವನ್ನೂ ಅಧ್ಯಾತ್ಮವನ್ನೂ ಎಲ್ಲ ಕರ್ಮಗಳನ್ನೂ ಸಂಪೂರ್ಣವಾಗಿ ತಿಳಿದುಕೊಳ್ಳುವರು.

ಸಾಧಿಭೂತಾಧಿದೈವಂ ಮಾಂ
ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇऽಪಿ ಚ ಮಾಂ
ತೇ ವಿದುರ್ಯುಕ್ತಚೇತಸಃ ॥ 30

ಅಧಿಭೂತ ಅಧಿದೈವ ಅಧಿಯಜ್ಞಗಳೊಡಗೂಡಿದ ನನ್ನನ್ನು ಯಾರು ತಿಳಿಯುತ್ತಾರೋ ನನ್ನಲ್ಲಿಯೇ ಮನಸ್ಸನ್ನಿಟ್ಟಿರುವ ಅವರು ಸಾವಿನ ಸಮಯದಲ್ಲಿ ಕೂಡ ನನ್ನನ್ನು ನೆನಪಿಡುವರು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮ-
ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ ಜ್ಞಾನಕರ್ಮ ಸನ್ಯಾಸಯೋಗೋ
ನಾಮ ಸಪ್ತಮೋऽಧ್ಯಾಯಃ ॥

7 ನೆಯ ಅಧ್ಯಾಯ ಮುಗಿದುದು. ★

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

(೨ನೇ ಪುಟದಿಂದ)

ತನ್ನ ಇಷ್ಟಾರ್ಥಸಿದ್ಧಿಗಾಗಿ ಮಾರ್ಗಶಿರ ಮಾಸ ದಲ್ಲಿ ಪ್ರತಿದಿನ ಗೋದೆ ತನ್ನ ಗೆಳತಿಯರೊಡನೆ ಕಾತ್ಯಾಯನೀ ವ್ರತಕ್ಕೆ ಸಮಾನವಾದ ಮಾರ್ಗ ಶಿರ ವ್ರತವನ್ನು ಮಾಡಲು ಸಂಕಲ್ಪಿಸಿದಳು.

ಆ ಮಾರ್ಗಶಿರಮಾಸದಲ್ಲಿ ಗೋದೆ ಪ್ರತಿನಿತ್ಯ ದಿನಕ್ಕೊಂದರಂತೆ ಹಾಡಿದ ಪಾಶುರಗಳೇ "ತಿರು ಪ್ಪಾವೈ". ಗೋದೆಯು ಆಚರಿಸಿದ ಸಿರಿನೋಂಪಿಯ ಸಮಯದಲ್ಲಿ ಬಂದಂತಹ ದಿವ್ಯ ಭಾವನಾರೂಪ ಗಾನವೇ ತಿರುಪ್ಪಾವೈ. ಸಿರಿ ನೋಂಪಿ, ಶ್ರೀವ್ರತ ಎಂಬುವುದಾಗಿ ನಾವು ಅರ್ಥಮಾಡಬಹುದು. ಆದ್ದರಿಂದಲೇ ಗೋದಾದೇವಿಯನ್ನು ಕೊಂಡಾಡು ವಾಗ ಶ್ರೀ ವೈಷ್ಣವರು

"ನಮಕ್ಕೇ ಪಾಮಾಲೈ ಪಾಡಿ
ಕೊಡುತ್ತಾಳ್ ತನಕ್ಕಾಹ
ಮಣಿವಣ್ಣನುಕ್ಕು ಪೂಮಾಲೈ
ಶೂಡಿಕ್ಕೊಡುತ್ತಾಳ್"

(ನಮ್ಮನ್ನು ಉದ್ಧಾರಮಾಡಲು ಮೂವತ್ತು ಪಾಶುರಗಳಲ್ಲಿ ಜ್ಞಾನವನ್ನು ನೀಡಿ ತನಗಾಗಿ ಮೊದಲೇ ಪುಷ್ಪಮಾಲೆಯನ್ನು ಮುಡಿದುಕೊಂಡು ಪರಮಾತ್ಮನಿಗೆ ಅರ್ಪಿಸಿದಳು) ಎನ್ನುತ್ತಾರೆ.

ಆ ಹಾಡು ಮುಕ್ತಿಗೆ ಸೋಪಾನ, ಅವಳ ಅಂತರಂಗದಲ್ಲಿ ಎದ್ದೇಳುವ ಭಾವನಾತರಂಗ ರಮ್ಯ, ಸೌಮ್ಯ, ಭವ್ಯ. ತಾನು ಪ್ರೀತಿಸಿದ ಪೂಜಿಸಿದ ಪರಮಾತ್ಮನನ್ನು ಕಾಣದಿರಲು ಆವ ನನ್ನು ಪಡೆಯುವ ಛಲವನ್ನು ಹೊತ್ತ ಗೋದೆ ಮಾರ್ಗಶಿರ ನೋಂಪಿಯನ್ನು ಪ್ರಾರಂಭಮಾಡು ವಾಗ ಬೆಳಗಿನ ಜಾವ ಶ್ರೀವಿಲ್ಲಿಪುತ್ತೂರಿನ ಹೆಣ್ಣು ಮಕ್ಕಳನ್ನು ಎಬ್ಬಿಸುವಾಗ, 'ಮಾಸಾನಾಂ ಮಾರ್ಗಶೀರ್ಷೋಸ್ಮಿ' ಎಂಬುವ ಭಗವದ್ಗೀ ತೆಯ ವಾಕ್ಯದಂತೆ, ಮಾರ್ಗಶಿರ ಮಾಸ ಬಹು ಪ್ರಶಸ್ತ ಎಂದು ನೆನಪಾಗುತ್ತದೆ. ಹಿಂದೆ ಕಾತ್ಯಾ ಯನೀವ್ರತ ಮಾಡಿ ಧನುರ್ಮಾಸದಲ್ಲಿ ಕೃತಕೃತ್ಯ ರಾದ ಗೋಪಿಯರನ್ನು ನೆನಪು ಕೊಡುತ್ತದೆ ತಿರುಪ್ಪಾವೈ. ಈ ಮೊದಲಿನ ಪಾಶುರ:

ಮಾರ್ಗಳಿತ್ತಿಂಗಳ್ ಮದಿ
ನಿರೈಂದ ನನ್ನಾಳಾಲ್
ನೀರಾಡಪ್ಪೋದುವೀರ್
ಪೋದುಮಿನೋ ನೇರಿಳೈಯೀರ್
ಶೀರ್‌ಮಲ್ಗುಮಾಯ್‌ಪ್ಪಾಡಿ
ಚ್ಚೆಲ್ವ ಚ್ಚಿರುಮೀರ್‌ಕಾಳ್
ಕೂರ್‌ವೇಳ್‌ಕೊಡುಂ ತೊಳಿಲನ್
ನಂದಗೋಪನ್‌ಕುಮರನ್
ಏರಾರ್ನ್ದ ಕಣ್ಣಿಯಶೋದೈ ಯಿಳಂ ಶಿಂಗಂ
ಕಾರ್ಮೇನಿ ಚ್ಚೆಂಗಣ್ ಕದಿರ್‌ಮದಿಯಂ
ಪೋಲ್‌ಮುಖತ್ತಾನ್
ನಾರಾಯಣನೇ ನಮಕ್ಕೇ ಪರೈತರುವಾನ್
ಪಾರೋರ್ ಪುಗಳ ಪಡಿಂದೇಲೋ
ರೆಂಬಾವಾಯ್

ಮಾರ್ಗಶಿರ ಮಾಸದಲ್ಲಿ ತುಂಬಿದ ಚಂದ್ರನ ಬೆಳಗಿ ನಲ್ಲಿ ನೀರಾಡ ಬನ್ನಿರಿ, ಶ್ರೀಕೃಷ್ಣನ ಜೊತೆಯಲಿ ಜಲಕ್ರೀಡೆ ಆಡುವ ಆಸೆಯುಳ್ಳವರೆ! ಸಿರಿಮೆರೆವ ನಂದಗೋಕುಲದ ನಲಿವಿನ ಸಿರಿಕನ್ನಿಕೆಯರೆ! ಚೂಪಾದ ವೇಲಾಯುಧವನ್ನು ಧರಿಸಿ ದುಷ್ಟರನ್ನು ನಿಗ್ರಹಿಸುವ ನಂದ ಕುವರ!

ಪ್ರೇಮದ ಕಣ್‌ಗಳ ಯಶೋದೆಯ ಮರಿಶಿಂಗ
ನೀಲಮೇಘಶ್ಯಾಮ, ಕಂಗೊಳಿಸುವ ಚೆಂಗಣ್ಣ
ರವಿ ಚಂದ್ರರಂತೆ ಜಗಚ್ಚಕ್ಷು ನಾರಾಯಣನು!
ಎಮಗೆ ವ್ರತಸಾಧನೆಯನ್ನು ಕೊಡುವವನು
ಲೋಕ ಪೊಗಳುವಂತೆ ಜಳಕವಾಡಲು
ನಮ್ಮ ವ್ರತವು ಫಲಿಸುವುದು

ಮುಂದಿನ ಪದ್ಯದಲ್ಲಿ ವ್ರತದ ನಿಯಮಗಳನ್ನು ಹೇಳುತ್ತಾ, ವ್ರತವನ್ನು ಆಚರಿಸುವವರು ಪರ ಮಾತ್ಮನ ಅಡಿದಾವರೆಗಳಲ್ಲಿ ಶರಣಾಗತರಾಗ ಬೇಕು, ತುಪ್ಪವನ್ನೂ ಹಾಲನ್ನು ಆಹಾರವಾಗಿ ಸ್ವೀಕರಿಸಕೂಡದು. ಕಣ್ಣುಗಳಿಗೆ ಕಾಡಿಗೆ ಹಚ್ಚು ವುದು, ಪುಷ್ಪವನ್ನು ಮುಡಿಯುವುದು ವಿಸರ್ಜಿಸ ಬೇಕು. ಚಾಡಿಮಾತು ಹೇಳಬಾರದು, ಬಿಕ್ಷುಕ ರಿಗೆ ಬಿಕ್ಷೆಯನ್ನು ಶಕ್ತ್ಯಾನುಸಾರ ನೀಡಬೇಕು, ಎಂಬುವುದಾಗಿ ಗೆಳತಿಗೆ ಹೇಳುತ್ತಾಳೆ ಗೋದೆ.

ಮೂರನೆಯ ಪಾಶುರದಲ್ಲಿ "ಓಂಗಿಯುಲ ಹಳಂದ ಉತ್ತಮನ್ ಪೇರ್‌ಪಾಡಿ ನಾಂಗಳ್ ನಂಪಾವೈಕ್ಕು ಚಾತ್ತಿ ನೀರಾಡಿನಾಲ್" ಎಂಬು ವುದಾಗಿ ಹೇಳುತ್ತಾ ಪರಮಾತ್ಮನ, ವಾಮನಾ ವತಾರ, ತ್ರಿವಿಕ್ರಮಾವತಾರ ತಿಳಿಸುತ್ತಾ ಭಗವಂತನ ಚರಿತೆಯನ್ನು ಮನನಮಾಡುತ್ತಾ ಇದ್ದರೆ ದುರ್ಭಿಕ್ಷವು ನಶಿಸುತ್ತದೆ. ತಿಂಗಳಿಗೆ ಮೂರು ಮಳೆಬಿದ್ದು ಬತ್ತದ ಪೈರುಗಳು ಬೆಳೆದು ಮೀನುಗಳು ಮಿನುಗಿ ಕನ್ನೈದಿಲೆ ಕಣ್ಗಂಪಾಗಿ ಮರಿದುಂಬಿ ನಿದ್ರಿಸಲು ಧನಧಾನ್ಯ ಗೋ ಜಲ ಸಮೃದ್ಧಿಯಾಗಿ ಪುಷ್ಪಗಳು ಭರಿತವಾಗಿ ಫಲಗಳು ಮಧುವಾಗಿ ಎಂದೂ ಅಳಿಯದ ಸಂಪತ್ತು ಪೂರ್ಣ ವಾಗಿರಲು ನಮ್ಮಗಳ ವ್ರತ ಫಲಿಸಲಿ ಎಂಬುವು ದಾಗಿ ಹಾಡುತ್ತಾಳೆ.

ನಾಲ್ಕನೆಯ ಪಾಶುರದಲ್ಲಿ ಗೋದೆ ಜಗವೆಲ್ಲ ನಲಿವಂತೆ ವರ್ಷವನ್ನು ಸುರಿಸಬೇಕೆಂಬುವುದಾಗಿ ಮಳೆರಾಯನನ್ನು ನುತಿಸುತ್ತಾಳೆ. ಈ ಪಾಶುರ ದಲ್ಲಿ ತಿರುಕ್ಕಣ್ಣಪುರದ ಕಣ್ಣ, ಶ್ರೀವಿಲ್ಲಿ ಪುತ್ತೂ ರಿನ ವಟಪತ್ರಶಾಯಿ, ಅನಂತಪದ್ಮನಾಭ, ಸುಂದರಬಾಹು ಸ್ವಾಮಿ, ಸಾರಂಗಪಾಣಿಗಳನ್ನು ಧ್ವನ್ಯಾರ್ಥಗಳಲ್ಲಿ ಸ್ತೋತ್ರ ಮಾಡುತ್ತಾಳೆ.

"ಮಾಯನೈ ಮನ್ನುವಡಮದುರೈ ಮೈನ್ದನೈ
ತೂಯ ಪೆರುನೀರ್ ಯಮುನೈತ್ತುರೈವನೈ"

– ಎಂದು ಐದನೆಯ ಪಾಶುರದಲ್ಲಿ ಪರಮಾತ್ಮ ನನ್ನು ಆಶ್ರಯಿಸುವ ಮನುಜರಿಗೆ ಪಾಪಕ್ಷಯ, ಪುಣ್ಯ ಸಂಚಯ,ಅವನ ಸಂಕೀರ್ತನೆಯಿಂದ ಭೂತ ಭವಿಷ್ಯತ್ ವರ್ತಮಾನಕಾಲಗಳಲ್ಲಿ ಮಾಡಿದ ಸಕಲ ಪಾಪಗಳ ನಾಶನವಾಗುವುದು ಕಾರಣ ಅವನ ನಾಮ ಸ್ಮರಣೆ ಅಗ್ನಿ ಯೋಪಾದಿಯಲ್ಲಿ ಎಲ್ಲವನ್ನೂ ದಹಿಸುತ್ತದೆ,

ಎಂಬುವುದಾಗಿ ತಿಳಿಸುತ್ತಾಳೆ. ಇಲ್ಲಿಂದ ಹತ್ತು ಪಾಶುರಗಳು ನಿದ್ರಿಸುತ್ತಿರುವ ತನ್ನ ಹತ್ತು ಸಖಿಯರನ್ನು ಎಬ್ಬಿಸುವ ಹಾಡುಗಳು, ಅಂತರಾರ್ಥದಲ್ಲಿ ಆಕೆ ಹತ್ತು ಆಳ್ವಾರುಗಳನ್ನು ಎಬ್ಬಿಸುವ ಸುಪ್ರಭಾತದ ಶ್ಲೋಕಗಳಂತೆ ಇವೆ. 'ಭಾರದ್ವಾಜ ಪಕ್ಷಿಗಳು ಕೀಚ್ ಕೀಚ್ ಎಂದು ಕೂಗುತ್ತಿರಲು, ಆ ಇಂಪಾದ ಧ್ವನಿಗೆ ಮಗ್ನರಾಗಿ ಗೋಪಿಯರು ಹಾಲು ಕರೆಯುತ್ತಿರಲು, ಅವರ ಕಂಠಾಭರಣ ಹಾಗೂ ಕೈಬಳೆಗಳ ನಿನಾದ, ಗುಡಿಯಲ್ಲಿ ಶಂಖ ಶಬ್ದ, ಮೇಲಾಗಿ ಸಖಿಯರ ಹರಿನಾಮ ಸಂಕೀರ್ತನೆ ಕೇಳುತ್ತಿದ್ದರೂ, ಮಲಗಿರುವೆಯಲ್ಲ ಮಗೆ' ಎಂಬುವುದಾಗಿ ಕೂಗಿ ಎಬ್ಬಿಸುತ್ತಾಳೆ

ಒಂಬತ್ತನೆಯ ಪಾಶುರದಲ್ಲಿ, ಆಕೆ ಗಾಢನಿದ್ರೆಯಲ್ಲಿರು ಸಖಿಯನ್ನು ಕುರಿತು

ತೂಮಣಿ ಮಾಡತ್ತುಚ್ಚುಟ್ರುಂ ವಿಳಕ್ಕೆರಿಯ
ತೂಪಂ ಕಮಳತ್ತುಯಿಲಣೈ ಮೇಲ್ಕಣ್ವಳರುಂ
ಮಾಮಾನ್ಮಗಳೇ! ಮಣಿಕ್ಕದವಂ
ತಾಳ್ತಿರವಾಯ್
ಮಾಮೀರವಳೈಯೆಳುಪ್ಪಿರೋ
ವುಣ್ಮಗಳ್ತಾ
ಊಮೈಯೋ, ಅನ್ರಿ ಚ್ಚೆವಿಡೋ
ಅನನ್ದಲೋ
ಏಮ ಪ್ಪೆರುನ್ದುಯಿನ್ಮನ್ದಿರ ಪ್ಪಟ್ಟಾಳೋ
ಮಾಮಾಯನ್ಮಾದವನ್ ವೈಕುನ್ದನೆನ್ರೆನ್ರು
ನಾಮಮುಂ ಫಲವುಂ ನವಿನ್ರೇಲೋ
ರೆಂಬಾವಾಯ್

* * * *

ನವರತ್ನ ಖಚಿತ್ನ ಮಾಡದಲ್ಲಿ ಎಲ್ಲೆಲ್ಲೂ ಬೆಳಕು
ಚೆಲ್ಲಿರಲು
ಗಮಗಮಿಸುವ ಧೂಪ ಪರಿಮಳ ಬೀಸುತಿರಲು
ಮೆತ್ತನೆಯ ಮಂಚದಮೇಲೆ ಸುಖವಾಗಿ
ನಿದ್ರಿಸುತಿರುವ
ಎನ್ನ ಸೋದರಮಾವನಮಗಳೇ
ಮಣಿಮಯಕದವ ತೆಗೆಯೆ
ಓ ನನ್ನ ಸೋದರತ್ತೆಯೇ! ನಿಮ್ಮ ಮಗಳನ್ನು
ಎಬ್ಬಿಸುವಿರಾ
ಅವಳು ಮೂಗಿಯೋ ಅಥವಾ ಕಿವುಡೋ
ನಾನರಿಯೆ ಮೇಣ್ ಗಾಢನಿದ್ರೆಯೋ
ನಿಮ್ಮ ಕಾವಲಿನಲ್ಲಿ ಕಟ್ಟು ಬಿದ್ದಿರುವಳೋ,
ನಿದ್ರಾಮಂತ್ರ ಮೋಹಿತಳೋ
ಮಾಮಾಯನ್, ಮಾಧವನ್, ವೈಕುನ್ದನ್
ಎಂದು ಪದೇ ಪದೇ ಅವನ ದಿವ್ಯ ನಾಮ
ಜಪಿಸಲು ನಮ್ಮ ವ್ರತ ಫಲಿಸಲಿ ಹೆಣ್ಣೇ ಎದ್ದೇಳು.

ಮುಂದಿನ ಪದ್ಯದಲ್ಲಿ ಸಖಿಯನ್ನು ಪರಿಹಾಸ್ಯ ಮಾಡುತ್ತಾ ನಾನು ಎಷ್ಟು ಕೂಗಿದರೂ ನೀನು ನಿದ್ದೆಯಿಂದ ಏಳಲಿಲ್ಲ "ನೀನೇನು ಕುಂಭಕರ್ಣನ ಗೆಳತಿಯೇನು! ನಿನಗೂ ಕುಂಭಕರ್ಣನಿಗೂ ಸ್ಪರ್ಧೆ ಇದ್ದಿರಬೇಕು. ಅವನು ಸೋತು ಸ್ವರ್ಗ ಸೇರಿದ. ಸ್ಪರ್ಧೆಯಲ್ಲಿ ಗೆದ್ದ ನೀನು ಇನ್ನೂ ಮಲಗಿರುವೆ. ಎದ್ದೇಳು" ಎಂಬುವುದಾಗಿ ಮೂದಲಿಸುತ್ತಾಳೆ. ಹನ್ನೊಂದನೆಯ ಪಾಶುರದಲ್ಲಿ ತನ್ನ ಗೆಳತಿ ಗೋಪಾಲರ ವಂಶದಲ್ಲಿ ಹುಟ್ಟಿದ ಸತ್ಕುಲ ಪ್ರಸೂತಳು, ಸರ್ಪದ ಹಾಗೆ ಬಳಕುವ ನಡುವುಳ್ಳವಳು, ನವಿಲುಬಣ್ಣದವಳು ಎಂಬುವುದಾಗಿ ಅವಳನ್ನು ಹೊಗಳಿ, ನಿನ್ನ 'ಮನೆಯ ಅಂಗಳದಲ್ಲಿ ನಾವೆಲ್ಲರೂ ಬಂದು ನೀಲಮೇಘಶ್ಯಾಮನ ನಾಮಗಳನ್ನು ಹಾಡುತ್ತಿರುವಾಗ ಅಲುಗದೆ ಮಾತಾಡದೆ ಮಲಗಿರುವೆಯೇಕೆ? ಹೆಣ್ಣೇ ನಮ್ಮ ವ್ರತಗಳು ಫಲಿಸಲಿ ಎದ್ದೇಳು' ಎಂಬುವುದಾಗಿ ಕರೆದಿದ್ದಾಳೆ. "ಪುಳ್ಳಿನ್‌ವಾಯ್ ಕೀಂಡಾನೈ ಪೊಲ್ಲಾವರಕ್ಕನೈ" ಎಂಬುವ ಪಾಶುರದಲ್ಲಿ 'ಬಕಾಸುರನ ಬಾಯನ್ನು ಸೀಳಿದ ಕೃಷ್ಣನ, ದುಷ್ಟರಾವಣನನ್ನು ಕೊಂದ ರಾಮನ, ದಿವ್ಯ ನಾಮಗಳನ್ನು ಪೊಗಳುತ್ತಾ ಸಂಕೇತ ಸ್ಥಾನಕ್ಕೆ ಮಿಕ್ಕ ಗೆಳತಿಯರು ಹೋದರು. ಬೆಳ್ಳಿ ಮೂಡಿತು, ಗುರುವು ಅಸ್ತಮಿಸಿದನು, ಹಕ್ಕಿಗಳು ಇಂಚರದಿ ಹಾಡುತಿವೆ, ಓ ಹರಿಣಿ ಚೆಲುವೆ. ಸ್ವಚ್ಛ ಶೀತಲ ನೀರಿನಲ್ಲಿ ಸ್ನಾನಮಾಡದೆ ಹಾಸಿಗೆಯಲ್ಲಿ ಮಲಗಿರುವೆ. ವ್ರತಕ್ಕೆ ಈ ದಿನ ಶುಭದಿನ, ಆಲಸ್ಯವನ್ನು ತೊರೆದು ನಮ್ಮೊಡನೆ ಸೇರಿ ನೋಂಪಿಯನ್ನು ಆಚರಿಸುವ ಬಾ ಹೆಣ್ಣೇ ನಮ್ಮ ವ್ರತ ಸಫಲವಾಗಲಿ' ಎಂಬುವುದಾಗಿ ಹೇಳುತ್ತಾಳೆ. ಮುಂದಿನ ಹಾಡಿನಲ್ಲಿ "ನಿಮ್ಮ ಹಿತ್ತಲಿನ ಬಾವಿಯಲ್ಲಿ ತಾವರೆ ಅರಳಿದೆ, ನೈದಿಲೆ ನಸುನಾಚಿ ನಿದ್ದೆಗೆಯ್ದಿದೆ. ತಪಸ್ವಿಗಳು ಸ್ನಾನಮಾಡಿ ತಮ್ಮಗಳ ಗುಡಿಸಲುಗಳಿಗೆ ಆರಾಧನೆ ಮಾಡಲು ಹೋಗುತ್ತಿದ್ದಾರೆ. ಎಲ್ಲರಿಗಿಂತಲೂ ಮುಂಚೆ ನೀನೆದ್ದು ಬಂದು ನಮ್ಮನ್ನು ಎಬ್ಬಿಸುವಿ ಎಂದು ವಾಗ್ದಾನಮಾಡಿದವಳಾದ ನೀನೆ ಮಲಗಿರುವೆ. ನಾಚಿಕೆಯಿಲ್ಲದವಳೇ, ಶಂಖ ಚಕ್ರಗಳನ್ನು ಕೈಯ್ಯಲ್ಲಿ ಹಿಡಿ ಪಂಕಜನಯನ ಕೃಷ್ಣನನ್ನು ಹಾಡುವ ಬಾ ಹೆಣ್ಣೇ" ಎಂಬುವುದಾಗಿ ಸಂಬೋಧಿಸುತ್ತಾಳೆ. ಹದಿನಾರನೆಯ ಪಾಶುರದಲ್ಲಿ ನಂದಗೋಪಾಲನ ಅರಮನೆಯ ದ್ವಾರಪಾಲಕನನ್ನು ಎಬ್ಬಿಸುವ ಹಾಡು, 17ನೆಯ ಪಾಶುರದಲ್ಲಿ ಮುಂಚೆ ನಂದಗೋಪ ಹಾಗೂ ಯಶೋದೆಯರನ್ನು ಎಬ್ಬಿಸಿ ತರುವಾಯ ಬಲರಾಮನನ್ನು ಎಚ್ಚರಿಸಿ ಆನೇಲೆ ಕೃಷ್ಣನನ್ನು ಕುರಿತು "ಅಂಬರಮೂಡರತ್ತು ಓಂಗಿ ಉಳಹಲಂದ ಉಂಬರ್ ಕೋಮಾನೇ ಉರಂಗಾದೆ ಎಳುಂದಿರಾಯ್" ಅಂದರೆ 'ಎಲ್ಲರನ್ನೂ ರಕ್ಷಿಸುವ ವ್ರತವನ್ನು ಕೈಗೊಂಡಿರುವ



ನೀನು ಮಲಗಬಹುದೇ. ಆಕಾಶವನ್ನು ಮೀರಿ ನಿಂತು ಮೂಜಗವನ್ನು ಅಳೆದ ತ್ರಿವಿಕ್ರಮನೇ ಎದ್ದೇಳು. ಆಶ್ರಿತ ರಕ್ಷಕ, ಅಪತ್‌ಬಾಂಧವ ಎದ್ದೇಳು'-ಎಂಬುವುದಾಗಿ ಹಾಡಿ ಎಬ್ಬಿಸುತ್ತಾಳೆ, ಹದಿನೆಂಟನೆಯ ಪಾಶುರದಲ್ಲಿ ದೇವದೇವನ ದಿವ್ಯ ಮಹಿಷಿ ನಪ್ಪಿನ್ನೈಯನ್ನು ಎಬ್ಬಿಸಿ ಅವಳನ್ನು ಮಲಗಿದ ಕೃಷ್ಣನನ್ನು ಎಬ್ಬಿಸುವಂತೆ ಕೇಳಿಕೊಳ್ಳುತ್ತಾಳೆ. ಕಾರಣ ಅವಳು ಪುರುಷಕಾರಳಲ್ಲವೇ? ಹತ್ತೊಂಬತ್ತು ಹಾಗೂ ಇಪ್ಪತ್ತನೆಯ ಪಾಶುರಗಳಲ್ಲಿ ನೀಳಾದೇವಿಯನ್ನು ಕುರಿತು ಕೃಷ್ಣನನ್ನು ಎಬ್ಬಿಸಿ ತಮ್ಮ ವ್ರತ ಸಫಲಗೊಳಿಸಲು ಶಿಫಾರಸ್ಸು ಮಾಡುವಂತೆ ಪ್ರಾರ್ಥನೆಮಾಡಿಕೊಳ್ಳುತ್ತಾಳೆ. ಮುಂದಿನ ಪಾಶುರದಲ್ಲಿ "ಏ ಗೋಪಾಲಕ ಗೋಗೋಪ ಗೋಪಿಕಾ ಅರಸ, ನಂದಕಿಶೋರ, ಆಶ್ರಿತ ಜನ ರಕ್ಷಕ, ದಿವ್ಯರೂಪ, ನಿನ್ನ ಅಡಿದಾವರೆಗಳಲ್ಲಿ ಶರಣಾಗತರಾಗಿ ಬಂದಿರುವೆವು, ನಮ್ಮನ್ನು ಕಾಪಾಡು" ಎಂಬುವುದಾಗಿ ಬೇಡಿಕೊಳ್ಳುತ್ತಾಳೆ.

೨೨ನೆಯ ಪಾಶುರದಲ್ಲಿ ರಾಜಾಧಿರಾಜರೆಲ್ಲರೂ ಸೋತು ನಿನ್ನನ್ನು ಸಾರ್ವಭೌಮನೆಂದು ತಿಳಿದು ತಲೆಬಾಗಿ ನಿಂತಿರುವಂತೆ ನಾವೆಲ್ಲರೂ ಕೂಡ ನಮ್ಮೆಲ್ಲವನ್ನೂ ನಿನ್ನ ಅಡಿದಾವರೆಗಳಲ್ಲಿ ಸಮರ್ಪಿಸಿ ಶರಣಾಗತರಾಗಿ ಬಂದಿರುವೆವು ಎಂಬುವ ಭಾವದಲ್ಲಿ ಹಾಡಿದ್ದಾಳೆ. 23ನೆಯ ಪಾಶುರದಲ್ಲಿ ಗುಹೆಯೊಳಗೆ ಮಲಗಿದ ಸಿಂಹ ಎಚ್ಚೆತ್ತು ಹೊರ

ಟಿಂಪು ನಿಲ್ಲುವಂತೆ ನೀನೂ ನಿನ್ನರಮನೆಯಿಂದ ಹೊರಬಂದು ಗಾಂಭೀರ್ಯದಿಂದ ಸಿಂಹಾಸನವನ್ನು ಅಲಂಕರಿಸಿ ನಮ್ಮಗಳ ಆಸೆಯನ್ನು ಪೂರೈಸು ಸ್ವಾಮೀ – ಎಂಬುವುದಾಗಿ ಮೊರೆಯಿಡುತ್ತಾಳೆ. ಅಂತಹ ಸ್ವಾಮಿಯು ಸಿಂಹಾಸನದಲ್ಲಿ ಕುಳಿತಿರಲು ಆ ಸೌಂದರ್ಯನಿಧಿಯನ್ನು ಕಂಡು ಗೋದೆ ಅವನಿಗೆ ದೃಷ್ಟಿ ತಗುಲೀತು ಎಂಬುವ ಭಾವನೆ ಯಿಂದ ಅವನಿಗೆ ಮಂಗಳಾಶಾಸನ ಮಾಡುತ್ತಾ 24 ನೆಯ ಪಾಶುರದಲ್ಲಿ 'ಅಂದು ಜಗವನಳೆದ ತ್ರಿವಿಕ್ರಮನ ಪಾದಗಳಿಗೆ ಮಂಗಳ. ದಕ್ಷಿಣದಿಕ್ಕಿಗೆ ಹೋಗಿ ರಾವಣನನ್ನು ಸಂಹರಿಸಿದ ನಿನ್ನ ಭುಜ ಗಳಿಗೆ ಮಂಗಳ, ಶಕಟಾಸುರನನ್ನು ಕೊಂದ ಕೃಷ್ಣನ ಕೀರ್ತಿಗೆ ಮಂಗಳ' ಎಂಬುವುದಾಗಿ ಮಂಗಳಾ ಶಾಸನ ಮಾಡಿದ್ದಾಳೆ.

25 ನೆಯ ಪಾಶುರದಲ್ಲಿ ಒಬ್ಬ ತಾಯಿಗೆ ಮಗ ನಾಗಿ ಹುಟ್ಟಿ ಬೇರೆಯವಳ ಮಗನಾಗಿ ಬೆಳೆದು ಕಂಸನಿಗೆ ಕಾಲಾಗ್ನಿಯಂತೆ ಬೆಳೆದ ಶ್ರೀಕೃಷ್ಣನೇ ನಮ್ಮಗಳನ್ನು ಕೃಪೆಯಿಂದ ನೋಡಿ ರಕ್ಷಿಸು-ಎಂದು ಪ್ರಾರ್ಥನೆಮಾಡುತ್ತಾಳೆ. ಮುಂದಿನ ಪಾಶುರದಲ್ಲಿ ಕೃಷ್ಣನು ಅವರ ವ್ರತಕ್ಕೆ ಮೆಚ್ಚಿ 'ಗೋಪಿಯರೆ ನಿಮಗೇನು ಬೇಕು' ಎಂದು ಕೇಳಲು ಆಗ ಆಕೆಯು "ಸ್ವಾಮಿ ಬಿಳಿಯ ಶಂಖಗಳನ್ನು, ಅಗಲವಾದ ಪಟಹಗಳನ್ನು, ಮಂಗಳದೀಪಗಳನ್ನು ಧ್ವಜ ಗಳನ್ನು ದಯಪಾಲಿಸಿ ನಮ್ಮನ್ನು ಉದ್ಧಾರ ಮಾಡು" ಎಂಬುವುದಾಗಿ ಮೊರೆಯಿಡುತ್ತಾಳೆ, ಇಪ್ಪತ್ತೇಳನೆಯ ಪಾಶುರದಲ್ಲಿ–ವ್ರತ ಸಮಾಪ್ತಿ ಯಾಗಿ ತಾವು ಹಿಂದೆ ತ್ಯಜಿಸಿದ ಆಭರಣಗಳನ್ನು ಪುನಃ ಧರಿಸಿ ವರ್ಜಿಸಿದ ಹಾಲು ತುಪ್ಪ ಸ್ವೀಕರಿಸು ವೆವು, ಎಂಬುವುದಾಗಿ ತಿಳಿಸುತ್ತಾ ಆನಂದಿಸುವಳು. ಕೊನೆಯ ಎರಡು ಪಾಶುರಗಳು ಶ್ರೀ ವೈಷ್ಣವರಿಗೆ ಅತಿಮುಖ್ಯ. ಅವುಗಳನ್ನು ಪ್ರತಿದಿನ ಪೂಜಾವೇಳೆ ಯಲ್ಲಿ ಕೊನೆಯಲ್ಲಿ ಶಾತ್ತುಮುರೈ ಸಮಯದಲ್ಲಿ ಹಾಡುತ್ತಾರೆ. ಎಲ್ಲಾ ದೇವಸ್ಥಾನಗಳಲ್ಲಿ ಶಾತ್ತು ಮುರೈ ಸಮಯದಲ್ಲಿ ಈ ಎರಡು ಪಾಶುರಗಳನ್ನು ಹಾಡಬೇಕೆಂದು ಶ್ರೀ ರಾಮಾನುಜರು ಅಪ್ಪಣೆ ಕೊಟ್ಟಿದ್ದಾರೆ ಈಗಲೂ ಪ್ರತಿದಿನ ಪ್ರತ್ಯೇಕವಾಗಿ ತಿರುಪತಿ ತಿರುಮಲೆಗಳಲ್ಲಿ ತಿರುಪ್ಪಾವೈ ಕೊನೆಯ ಎರಡು ಪಾಶುರಗಳನ್ನು ಜೀಯರ್ ಜೊತೆಯಲ್ಲಿ ಹಾಡುವ ಸಂಪ್ರದಾಯ ಮುಂದುವರೆದು ಬಂದಿದೆ. ಗೋದಾದೇವಿಯ ವ್ರತ ಸಂಪೂರ್ಣವಾದಂತೆ ಶ್ರೀ ವಿಷ್ಣು ಚಿತ್ತರಿಗೆ ಶ್ರೀರಂಗನಾಥನು ಕನಸ್ಸಿನಲ್ಲಿ ಕಾಣಿಸಿಕೊಂಡು ಆಕೆಯನ್ನು ಸಕಲ ಮರ್ಯಾದೆ ಯೊಡನೆ ಶ್ರೀರಂಗಕ್ಕೆ ಕರೆತಂದು ತನ್ನ ಸನ್ನಿಧಿ ಯಲ್ಲಿ ಅರ್ಪಿಸುವಂತೆ ಅಪ್ಪಣೆ ಕೊಟ್ಟನು. ಗೋದೆ ಹಾಗೂ ಶ್ರೀರಂಗನಾಥರ ವಿವಾಹವಾರ್ತೆ ಎಲ್ಲಾ ಕಡೆ ಹರಡಿತು. ರಾಜಾವಲ್ಲಭದೇವನು ಅತಿಭಕ್ತಿ ಯಿಂದ ಗೋದಾದೇವಿಯನ್ನು ಶ್ರೀರಂಗಕ್ಕೆ ಕರೆ ತರಲು ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟು ತಾನೂ ಶ್ರೀರಂಗಕ್ಕೆ ತೆರಳಿದನು. ರಾಜಭಟರು ಗೋದಾದೇವಿಯನ್ನು ಪಲ್ಲಕ್ಕಿಯಲ್ಲಿ ಹೊತ್ತು ಸುಮಂಗಲಿಯರೊಡನೆ ಶ್ರೀ ವೈಷ್ಣವ ಗೋಷ್ಠಿ ಯೊಡನೆ ಸಕಲರಾಜಮರ್ಯಾದೆಗಳೊಡನೆ ಶ್ರೀರಂಗದಲ್ಲಿ ನಡೆದು ಬರುತ್ತಿರಲು, ತ್ರೇತಾ ಯುಗದಲ್ಲಿ ಸೀತಾಸ್ವಯಂವರವನ್ನು ನೆನಪಿಗೆ ತರು ತ್ತಿತ್ತು. ಶ್ರೀರಂಗನಾಥನ ಸನ್ನಿಧಿಯಲ್ಲಿ ಗೋದಾ ದೇವಿಯು ಶ್ರೀರಂಗನಾಥನ ಪಾದಕಮಲಗಳಲ್ಲಿ ಕುಳಿತಿರಲು, ಎಲ್ಲರೂ ನೋಡುತ್ತಿರುವಂತೆ ಗೋದೆ ಶ್ರೀರಂಗನಾಥನಲ್ಲಿ ಐಕ್ಯವಾದಳು. ತಿರುಪ್ಪಾವೈಗೆ ಹಲವು ವ್ಯಾಖ್ಯಾನಗಳುಂಟು. ಪೆರಿಯವಾಚ್ಚಾನ್ ಪಿಳ್ಳೈ ಅವರ ಮೂವಾಯಿರಪ್ಪಡಿ ವ್ಯಾಖ್ಯಾನ ಬಹಳ ಅದ್ಭುತವಾಗಿದೆ. ಕಾಂಚೀಪುರದ ಪ್ರತಿವಾದಿ ಭಯಂಕರ ಶ್ರೀ ಅಣ್ಣಂಗರಾಚಾರ್ಯ ಸ್ವಾಮಿ ಗಳು ತಮಿಳು, ಸಂಸ್ಕೃತ, ಹಿಂದಿ, ತೆಲುಗಿನಲ್ಲಿ ನೀಡಿರುವ ತಿರುಪ್ಪಾವೈ ಅರ್ಥ ಅಮೋಘವಾಗಿದೆ. ಕನ್ನಡದಲ್ಲಿ ಶ್ರೀಯುತರಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜ.ಪಿ ರಾಜರತ್ನಂ, ಕೃಷ್ಣ ತಾತಾ ಚಾರ್ಯ, ಮುಡುಂಬೈ ರಾಮಾನುಜಯ್ಯಂಗಾರ್ (ಹಿಂದಿನ ಅಳಹಿಯಮಣವಾಳ್ ಜೀಯರ್ ಸ್ವಾಮಿ ಗಳು), ಸಂಪತ್ತಯ್ಯಂಗಾರ್, ವಿ. ಟಿ. ತಿರುನಾ ಯಣ ಅಯ್ಯಂಗಾರ್, ಎಂ. ಬಿ. ಶ್ರೀನಿವಾಸ ಅಯ್ಯಂಗಾರ್, ಅ.ನ. ಶ್ರೀನಿವಾಸ ಅಯ್ಯಂಗಾರ್ ತೂಪ್ಪಲ್ ರಾಘವಾಚಾರ್ಯರು ಹಾಗೂ ಶ್ರೀಮತಿ ವಿನೋದಾಬಾಯಿ ಮತ್ತು ಯದುಗಿರಿ ಕುಮಾರಿ ಮುಂತಾದವರು ತಿರುಪ್ಪಾವೈ ಬಗ್ಗೆ ಸೊಗಸಾದ ಗ್ರಂಥಗಳನ್ನು ನೀಡಿ ಕನ್ನಡದಲ್ಲಿ ತಿರುಪ್ಪಾವೈ ಪ್ರಚಾರಕ್ಕಾಗಿ ಬಹಳವಾದ ಉಪ ಕಾರ ಮಾಡಿದ್ದಾರೆ.

ಪೆರಿಯವಾಚ್ಚಾನ್ ಪಿಳ್ಳೈ ಅವರ ಸ್ವಾಪದೇಶ ಅಂದರೆ ವಿಶೇಷಾರ್ಥಗಳ ವ್ಯಾಖ್ಯಾನ ಓದಿ ಆನಂದಪಡೆಯುವುದೇ ಒಂದು ಮಹಾಭಾಗ್ಯ, ತಿರುಪ್ಪಾವೈ ಧನುರ್ಮಾಸದಲ್ಲಿ ಪಠಿಸಿ ಪುನೀತರಾ ಗುವುದು ಎಲ್ಲರ ಪುಣ್ಯವಿಶೇಷ. ತಿರುಪ್ಪಾವೈ ದಿನವೂ ಹಾಡಿದರೆ ಸಕಲ ಸಂಪತ್ತು ಲಭಿಸಿ ಅರಿಷ್ಟ ನಿವಾರಣೆಯಾಗುತ್ತದೆ ಎಂಬುವುದು ಅಂದಿನಿಂದ ಇಂದಿನವರೆಗೂ ಬಂದ ನಂಬಿಕೆ. ಅಂತೆಯೇ ಫಲ ಪ್ರಾಪ್ತಿ ದಿಟವಾಗಿದೆ. ತಿರುಪ್ಪಾವೈ ದಿನವೂ ಪಠಿ ಸಲು ಸಮಯವಿಲ್ಲದಿದ್ದರೆ ಅದರ ಕೊನೆಯ ಪಾಶು ರಗಳನ್ನು ಪಠಿಸಿ ಕೃತಕೃತ್ಯರಾಗೋಣ.

ಶಿಟ್ರಂ ಶಿರುಗಾಲೇ ವನ್ದುನ್ನೈ ಚ್ಚೇವಿತ್ತುನ್
ಪೊತ್ತಾಮರೈಯಡಿಯೇ ಪೋತ್ತುಂ
ಪೊರುಳ್ ಕೇಳಾಯ್ ।
ಪೆಟ್ರಂ ಮೇಯ್‌ತ್ತುಣ್ಣುಂ ಕುಲತ್ತಿಲ್
ಪಿರಂದ ನೀ
ಕುಟ್ರೇ ವಲೆಂಗಳ್ಳೈಕ್ಕೊಳ್ಳಾಮಲ್
ಪೋಹಾದು
ಇಟ್ರೈಪ್ಪರೈ ಕೊಳ್ವಾನನ್ರು ಕಾಣ್
ಗೋವಿಂದಾ
ಎಟ್ರೈಕ್ಕುಮೇಳೇಳು
ಪಿರವಿಕ್ಕುಮುನ್ತನ್ನೋಡು
ಉಟ್ರೋಮೇಯಾವೋಮುನಕ್ಕೇ
ನಾಮಾಳ್ಚೆಯ್‌ವೋಂ
ಮಟ್ರೈನಂ ಕಾಮಂಗಳ್ ಮಾತ್ತೇಲೋ
ರೆಂಬಾವಾಯ್ ॥

ವಂಗಕ್ಕಡಲ್ ಕಡೈಂದ ಮಾಧವನ್ನೈ
ಕೇಶವನ್ನೈ
ತ್ತಿಂಗಳ್ ತಿರುಮುಹತ್ತೈ ಚೇಯಿಳ್ಳೆಯಾರ್
ಶೆನ್ರಿರೈಂಜಿ
ಅಂಗಪ್ಪರೈ ಕೊಂಡವಾತ್ತೈ ಅಣಿಪುದುವೈ
ಪೈಂಗಮಲತ್ತಣ್ತಿರಿಯಲ್ ಪಟ್ಟರ್‌ಪಿರಾನ್
ಕೋದೈ ಶೊನ್ನ
ಶಂಗತ್ತಮಿಳ್‌ಮಾಲೈ ಮುಪ್ಪದುಮ್
ತಪ್ಪಾಮೇ
ಇಂಗಿಪ್ಪರಿಶುರೈಪ್ಪಾರೀರಂಡು ಮಾಲ್‌ವರೈ
ತ್ತೋಳ್
ಶೆಂಗನ್ ತಿರುಮುಕತ್ತು ಚ್ಚೆಲ್ವ
ತಿರುಮಾಲಾಲ್
ಎಂಗುಮ್ ತಿರುವರುಳ್ ಪೆತ್ತು
ಇನ್ಬುರುವರೆಂಬಾವಾಯ್

ಗೋದೆ ಹಾಡಿದ ಈ ಮಹಾಕಾವ್ಯ ಅಜರಾಮರ ವಾಗಿ ಸತ್ಯತತ್ತ್ವ ಭಕ್ತಿಪೂಜಿತವಾಗಿ ಮಹತ್ವ ಪೂರ್ಣವಾಗಿದೆ. ಈ ಕಾವ್ಯ ಎಲ್ಲಾತರಹ ಆನಂದ ವನ್ನೂ ನೀಡುತ್ತದೆ. ಸರ್ವಮಂಗಳಗಳನ್ನೂ ನೀಡು ತ್ತದೆ. ★

# ತಿರುಮಲೆಯಲ್ಲಿ ತೋಟ ಉತ್ಸವ

—ಕೆ.ಎ.ವಿ. ಗೋಪೀಕೃಷ್ಣ

ತಿರುಮಲೆಯಲ್ಲಿ 23–9–83 ರಂದು ಬ್ರಹ್ಮೋತ್ಸವದ ಮಧ್ಯದಲ್ಲಿ ತೋಟ ಉತ್ಸವವು ನಡೆಯಿತು. ಇದು ಮೊದಲು ನಡೆಯುತ್ತಿದ್ದು ಮಧ್ಯದಲ್ಲಿ ನಿಂತು ಈಗ ಪುನರುದ್ಧರಣವಾಗಿದೆ.

ದೇವಸ್ಥಾನದ ಶಾಸನಗಳಲ್ಲಿ ತೋಟತಿರುನಾಲ್ ತೋಪುತಿರುನಾಲ್ ಎಂದು ವ್ಯವಹರಿಸಲಾಗಿರುವ ಈ ಉತ್ಸವ ಮೊತ್ತಮೊದಲ ಬಾರಿಗೆ ಸಾಳುವ ನರಸಿಂಹರಾಯನ ಕಾಲದ 17–2–1464 (ಸಂಪುಟ 2 ಶಾಸನ 113) ದಿನದ ಶಾಸನದಲ್ಲಿ ಕಂಡುಬರುತ್ತದೆ. ಚಂದ್ರಗಿರಿಯ ನಿವಾಸಿಯಾದ ಹಾರೀತ ಗೋತ್ರ, ಅಶ್ವಲಾಯನ ಸೂತ್ರದ ನಿಯೋಗಿ ತಿಮ್ಮಣ ದಂಡನಾಯಕನದ್ದಾದ ಈ ಶಾಸನದಲ್ಲಿ ತೋಟ ಉತ್ಸವ 20 ದಿನಗಳಕಾಲ ನಡೆಯುವಂತೆಯೂ, ಉತ್ಸವ ಆರಂಭವಾದ ದಿನ ಹಾಗೂ 11 ನೆಯ ದಿನಗಳಲ್ಲಿ ತಿಮ್ಮಣ ದಂಡನಾಯಕನು ಶ್ರೀ ವೆಂಕಟೇಶ್ವರಸ್ವಾಮಿಗೆ ಕೈಂಕರ್ಯದ ಏರ್ಪಾಡು ಮಾಡಿದನೆಂದೂ ಹೇಳಲಾಗಿದೆ.

ಶ್ರೀಕೃಷ್ಣದೇವರಾಯನ ಕಾಲದ ಎಂದರೆ 15–9–1512 ರ ಶಾಸನದಲ್ಲಿ (ಸಂಪುಟ–3 ಶಾಸನ–28) ತಿರುಪತಿ ಸಮೀಪದ ನರಸಿಂಗಾಪುರದ ನಿವಾಸಿ ವಂಡಯಾರಂ ಶಿನ್ನಮಶೆಟ್ಟಿಯಾರ್‌ನ ಪುತ್ರ ಪಪ್ಪುಶೆಟ್ಟಿ ಅಯ್ಯನ್, ತಿರುಪತಿ ಶ್ರೀ ಗೋವಿಂದರಾಜಸ್ವಾಮಿ, ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿಗಳು ತಮ್ಮ ತೋಟಗಳ ಮಂಟಪಗಳಿಗೆ ಬಿಜಯಮಾಡಿದಾಗ ತಿರುಪತಿ ತಿರುಮಲೆಗಳಲ್ಲಿ ನಡೆಯಬೇಕಾದ ಮರ್ಯಾದೆಗಳನ್ನು ಬೇರೆಬೇರೆಯಾಗಿ ತಿಳಿಸಿದ್ದಾನೆ. ಶಾಸನಗಳಲ್ಲಿ ಹೇಳಲಾಗಿರುವ ಎರಡನೆ ತೋಟ ಉತ್ಸವ ಇದು.

ಅಚ್ಯುತದೇವರಾಯರ ಕಾಲದ 6–3–1536 ರ ಶಾಸನದಲ್ಲಿ (ಸಂಪುಟ 4 ಶಾಸನ 73) ಶ್ರೀ ಪರಾಶರ ಭಟ್ಟಾಚಾರ್ಯರ ಶಿಷ್ಯನಾದ ಮಟ್ಲ ಮಲ್ಲಯ್ಯನ ಪುತ್ರ ರಾಮಯ್ಯನ್, ರಾಮಭಟ್ಟನ ತೋಟಉತ್ಸವ, ರಾಮಚಂದ್ರ ದೀಕ್ಷಿತ ತೋಟ ಉತ್ಸವ, ಅಪ್ಪಾಪಿಳ್ಳೈ ತೋಟ ಉತ್ಸವಗಳಿಗೆ ಉಭಯವನ್ನು ಏರ್ಪಾಡುಮಾಡಿದಂತೆ ತಿಳಿಸಲಾಗಿದೆ.

5ನೇ ಸಂಪುಟದ 18ನೇ ನಂಬರಿನ ಶಾಸನದಲ್ಲಿ ಬಯ್ಯಪ್ಪ ನಾಯಕರ್ ತೋಟ ಉತ್ಸವ, 19ನೇ ಶಾಸನದಲ್ಲಿ ಕುಮಾರಪಲ್ಲಿಯ ಕಟ್ಲ ಕೊಂಡಮ ನಾಯಕರ್ ಪುತ್ರ ಮೂರ್ತಿನಾಯಕರ್‌ಗೆ ಸಂಬಂಧಿಸಿದ ತೋಟ ಉತ್ಸವಗಳನ್ನು ಕುರಿತು ಹೇಳಲಾಗಿದೆ. ಸದಾಶಿವರಾಯನ ಕಾಲಕ್ಕೆ ಸೇರಿದ (ದಿನಾಂಕ 7–8–1544) ಈ ಶಾಸನ ತೋಟ ಉತ್ಸವಕ್ಕೆ ಸಂಬಂಧಿಸಿದ ಒಂದೇ ಒಂದು ಪೂರ್ಣ ಶಾಸನ.

ತೋಟ ಉತ್ಸವ ನಡೆಯಬೇಕಾದ ಕ್ರಮ, ಶ್ರೀ ಮಲೆಯಪ್ಪಸ್ವಾಮಿಗೆ, ಶ್ರೀ, ಭೂದೇವಿಯರಿಗೆ, ಕೃಷ್ಣಸ್ವಾಮಿಗೆ, ವಿಶ್ವಕ್ಸೇನ, ಭಾಷ್ಯಕಾರರಿಗೆ ನಡೆಯಬೇಕಾದ ಉಭಯ, ಮರ್ಯಾದೆ, ಸಮರ್ಪಿಸಬೇಕಾದ ನೈವೇದ್ಯ, ಮೊದಲಾದ ಕೈಂಕರ್ಯಗಳನ್ನೆಲ್ಲ ಸವಿವರವಾಗಿ ಈ ಶಾಸನ ಚಿತ್ರಿಸುತ್ತದೆ.

ಈ ಉತ್ಸವದ ವೆಚ್ಚಗಳಿಗಾಗಿ ಮೂರ್ತಿನಾಯಕನು ರಾಜೇಂದ್ರಸಿಂಗನಲ್ಲೂರಿನಲ್ಲಿ 50 ಸುವರ್ಣರೇಖೆ ಹೊನ್ನು ಪುದಿಪಟ್ಲ ಕೋನೇಟಿ ಕಾಲವೆಯಲ್ಲಿ 25 ಸುವರ್ಣ ರೇಖೆ ಹೊನ್ನು ಆದಾಯ ಬರುವಂತಹ ಭೂಮಿಯನ್ನು ಕೊಂಡು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಭಂಡಾರಕ್ಕೆ ಒಪ್ಪಿಸಿದ್ದಾನೆ. ಈ 75 ರೇಖೆ ಹೊನ್ನಿನಲ್ಲಿ ಯಾವುದಕ್ಕಾಗಿ ಎಷ್ಟು ವೆಚ್ಚ ಮಾಡಬೇಕೆಂಬುದನ್ನೂ ಶಾಸನದಲ್ಲಿ ಹೇಳಲಾಗಿದೆ

ಮೂರ್ತಿನಾಯಕರ್‌ನಿಂದ ಕೊಳ್ಳಲ್ಪಟ್ಟು, ಸಾಗುವಳಿ ನಡೆಯುತ್ತಿರುವ ಹೂವಿನ ತೋಟದಲ್ಲಿ ನಿರ್ಮಿಸಲಾದ ಮಂಟಪದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀ, ಭೂದೇವಿಯರು, ಶ್ರೀಕೃಷ್ಣ, ಸೇನಾಧಿಪತಿ, ರಾಮಾನುಜರು–ತಾಳ್ಳಪಾಕ ತಿರುಮಲಯ್ಯಂಗಾರ್ಯನು ಏರ್ಪಾಡುಮಾಡಿದ ಆಡಿ ಬ್ರಹ್ಮೋತ್ಸವದ (ಜೂನ್-ಜುಲೈ) ಅಂಕುರಾರ್ಪಣೆಯ ದಿನ ಶ್ರವಣನಕ್ಷತ್ರಯುಕ್ತ ಮುಹೂರ್ತದಲ್ಲಿ ಆಸೀನರಾಗುತ್ತಾರೆ. ನಂತರ ಪುನುಗು ಚಂದನ ಇತ್ಯಾದಿಗಳಿಂದ ಅವರಿಗೆ ತಿರುಮಂಜನ ನಡೆಯುತ್ತದೆ. ನಂತರ ಅಲಂಕಾರ, ನೈವೇದ್ಯ, ಆರತಿ, ಶಠಾರಿ–ಈ ಕ್ರಮ – ಈಗಲೂ ಈ ಕ್ರಮದಲ್ಲೇ ನಡೆಯುತ್ತದೆ. ಈಚೆಗೆ ನಡೆದ ಉತ್ಸವದಲ್ಲೂ ಹೀಗೇ ನಡೆಯಿತು.

ತೋಟ ಉತ್ಸವ ಆ ಹೆಸರಿನಲ್ಲಿ ನಡೆದ ಕಡೆಯ ದಾಖಲೆ ವೆಂಕಟಪತಿ ರಾಯನ ಕಾಲದಲ್ಲಿನ (31–3–1606) ಶಾಸನದಲ್ಲಿ ಕಾಣಬಹುದು. (6ನೇ ಸಂಪುಟ 13ನೇ ಶಾಸನ) ವಿಜಯನಗರ ಕೋಶಾಧಿಪತಿಯಾದ ಬೊಕ್ಕಸಂ ಕೃಷ್ಣಯ್ಯ ತನ್ನ ತಂದೆಯಾದ ಬೊಕ್ಕಸಂ ನರಸಯ್ಯನ ಹೆಸರಿನಲ್ಲಿದ್ದ ಹೂದೋಟದ ಮಂಟಪದಲ್ಲಿ ಅದನ್ನು ನಡೆಸಿದ ನಂತರ ಅದು ನವಾಬರ ಕಾಲದಲ್ಲಿಯೂ, ಕಂಪನಿಯವರ ಕಾಲದಲ್ಲಿಯೂ, ಮಹಂತರ ಕಾಲದಲ್ಲಿಯೂ ನಡೆದಂತಹ ದಾಖಲೆಗಳಿಲ್ಲ. ಹೀಗಾಗಿ ಸುಮಾರು 400 ವರ್ಷಗಳ ನಂತರ 1983 ರಲ್ಲಿ ಮತ್ತೆ ನಡೆಯಿತು ಎನ್ನಬೇಕು.

ತೋಟ ಉತ್ಸವ ಎಂಬ ಹೆಸರಿಲ್ಲದಿದ್ದರೂ ತಿರುಮಲೆಯ ಸ್ವಾಮಿ ಹಲವು ಮುಖ್ಯ ಪ್ರದೇಶಗಳನ್ನು ಸಂದರ್ಶಿಸುವುದು, ವನಭೋಜನ, ಮೊದಲಾದ ಉತ್ಸವಗಳೆಲ್ಲ ತೋಟ ಉತ್ಸವದಡಿಯಲ್ಲೇ ಸೇರುತ್ತವೆ.





ತಿರುಮಲೆಯ ಶಿಲಾರಥ ಮಂಟಪದಲ್ಲಿ ಶ್ರೀ ಭೂ ಸಹಿತ ಶ್ರೀನಿವಾಸದೇವರು ಹಾಗೂ ಮಂಟಪದ ಒಂದು ನೋಟ.

ತಿರ. ಚಾನೂರು ಪದ್ಮಾವತೀ ಅಮ್ಮನವರು ಶುಕ್ರವಾರ ತೋಟಕ್ಕೆ ಆಗಮಿಸುವುದು, ತಿರುಪತಿ ಗೋವಿಂದರಾಜಸ್ವಾಮಿಯ ಹೊನ್ನ ಕಾಲುವೆ ಮಹೋತ್ಸವ, ಶ್ರೀ ವೆಂಕಟೇಶ್ವರಸ್ವಾಮಿಯು ಪುರೀಶರತೋಟ, ಮೈಸೂರು ಮಹಾರಾಜರ ತೋಟಗಳಿಗೆ ಭೇಟಿ ನೀಡುವುದೆಲ್ಲ ತೋಟ ಉತ್ಸವದ ಹೆಸರಿಗೇ ಲೆಕ್ಕ.

ಕಳೆದ ಎರಡು ವರ್ಷಗಳಿಂದ ಆಲೋಚನೆ ನಡೆದು ಈಗ ಈ ಉತ್ಸವವನ್ನು ಪುನರುದ್ಧರಿಸಿದ್ದಾರೆ. ಮೂರು ವರ್ಷಗಳ ಮುನ್ನ ಪುಷ್ಪಯಾಗ ಇದೇ ರೀತಿ ಪುನಃ ಉದ್ಧರಿಸಲ್ಪಟ್ಟಿತು. ಈ ಬಾರಿ ಈ ಉತ್ಸವ ತಿರುಮಲೆಯ ಕ್ರಿ.ಶ. 1527 ರ ಶಿಲಾರಥ ಮಂಟಪದಲ್ಲಿ ನಡೆಯಿತು. ತತ್ಸಂಬಂಧಿ ಚಿತ್ರಗಳನ್ನೂ ನೋಡಬಹುದು.

—ಅನುವಾದ: ಬಿ ಎನ್'.ಎಸ್'

## ಸಂಸ್ಕೃತ ವಿಶ್ವವಿದ್ಯಾಲಯ - ಒಂದು ತುರ್ತು ಅಗತ್ಯ

ಆಂಧ್ರಪ್ರದೇಶದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಬಗ್ಗೆ ಭಾರತ ಸರ್ಕಾರದ ಉದ್ದೇಶವನ್ನು ಡಾ|| ಇ. ವೇದವ್ಯಾಸ ಐ. ಎ ಎಸ್. ಅವರು ಸ್ವಾಗತಿಸಿದ್ದಾರೆ.

ಮಹಾಭಾರತದ ಯುದ್ಧದ ಕಾಲವನ್ನು ವೈಜ್ಞಾನಿಕವಾಗಿ ಸ್ಥಿರೀಕರಿಸಿದ ಸಂಶೋಧನೆಗಾಗಿ ಆಂಧ್ರ ವಿಶ್ವವಿದ್ಯಾನಿಲಯದವರಿಂದ ಸಂಸ್ಕೃತದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದಿರುವ ಡಾ|| ವೇದವ್ಯಾಸ ಅವರು ಕೇಂದ್ರ ಶಿಕ್ಷಣ ಖಾತೆ ಸಚಿವೆ ಶ್ರೀಮತಿ ಶೀಲಾಕೌರ್ ಅವರು ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯ ಬಗ್ಗೆ ಮಾಡಿದ ಘೋಷಣೆಯ ವರದಿಯನ್ನು ಕುರಿತು ಮಾತನಾಡುತ್ತ 'ಆಂಧ್ರಪ್ರದೇಶದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯ ಒಂದು ತುರ್ತು ಅಗತ್ಯ, ವಾಸ್ತವವಾಗಿ ಎಂದೋ ಆಗಬೇಕಾಗಿದ್ದದ್ದು' ಎಂದರು

ಈ ವಿಶ್ವವಿದ್ಯಾನಿಲಯ ಆಂಧ್ರದ ಪ್ರಮುಖ ಸ್ಥಳವೊಂದರಲ್ಲಿ ಸ್ಥಾಪನೆಯಾಗಿ, ಜರ್ಮನಿ, ಇಂಗ್ಲೆಂಡ್, ರಷ್ಯಾ, ಅಮೇರಿಕಾದ ಸಂಯುಕ್ತ ಸಂಸ್ಥಾನಗಳು ಮೊದಲಾದ ದೇಶಗಳ ಪ್ರಮುಖ ವಿದ್ವಾಂಸರನ್ನು ಆಕರ್ಷಿಸುವಂತಿರಬೇಕು ಎಂದೂ ಹಾಗೆ ಮಾಡುವುದರ ಮೂಲಕ ಈ ವಿಶ್ವವಿದ್ಯಾನಿಲಯ ಸಂಸ್ಕೃತ ಭಾಷೆಯ ಅಧ್ಯಯನಕ್ಕೆ ಮಾತ್ರವೇ ಮೀಸಲಾಗದೆ ಭಾರತೀಯ ಸಂಸ್ಕೃತಿಯ ಅಂತರರಾಷ್ಟ್ರೀಯ ಅಧ್ಯಯನ ಕೇಂದ್ರವಾಗಬೇಕು ಎಂದೂ ನುಡಿದರು.

ಈ ವಿಶ್ವವಿದ್ಯಾನಿಲಯ ಸಂಸ್ಕೃತ ಸಾಹಿತ್ಯಾಭ್ಯಾಸದ ಸಂಕುಚಿತ ಪರಿಮಿತಿಯಿಂದ ದೂರವಾಗಬೇಕಿದ್ದಲ್ಲಿ ಅಂತರರಾಷ್ಟ್ರೀಯ ಪರಿಕಲ್ಪನೆಗಳನ್ನು ಹೊಂದಿದ ಪ್ರತಿಭಾವಂತರ ಸೇವೆಯನ್ನು ಪಡೆಯಬೇಕಾಗುತ್ತದೆ ಎಂದು ನುಡಿದರು.

ಜರ್ಮನ್, ಫ್ರೆಂಚ್ ಭಾಷೆಗಳನ್ನು ಅಲ್ಲಿನ ಸ್ನಾತಕೋತ್ತರ ವಿಜ್ಞಾನ ಪದವಿಗಳಲ್ಲಿ ಕಡ್ಡಾಯ ಅಧ್ಯಯನ ವಿಷಯವನ್ನಾಗಿಸಿದಂತೆ ನಮ್ಮಲ್ಲೂ ವಿಜ್ಞಾನದ ಸ್ನಾತಕೋತ್ತರ ಪದವಿಗಳಲ್ಲಿ ಸಂಸ್ಕೃತವನ್ನು ಕಡ್ಡಾಯವಿಷಯವನ್ನಾಗಿಸುವುದರ ಮೂಲಕ, ನಮ್ಮ ವಿದ್ಯಾರ್ಥಿಗಳು ವಿವಿಧದೇಶಗಳ ಸಂಸ್ಕೃತ ವಿದ್ವಾಂಸರೊಂದಿಗೆ ಸ್ಪರ್ಧಾತ್ಮಕವಾಗಿ ಭಾಗವಹಿಸಲೂ, ನಮ್ಮ ಭೌತ, ಸಸ್ಯ, ಜೀವ, ಗಣಿತಶಾಸ್ತ್ರದ ಅಧ್ಯಾಪಕರು ಸಂಸ್ಕೃತದಲ್ಲಿನ ಈ ಎಲ್ಲ ಶಾಸ್ತ್ರಗಳನ್ನೂ ವಿಶೇಷವಾಗಿ ಅಧ್ಯಯನ ಮಾಡಲೂ ಅವಕಾಶ ಮಾಡಿಕೊಡಬೇಕು ಎಂದೂ ಅವರು ನುಡಿದರು. ★

## ತಿ. ತಿ. ದೇವಸ್ಥಾನಗಳ ಟ್ರಸ್ಟ್‌ಬೋರ್ಡ್‌ ಹೊಸ ಸದಸ್ಯರ ನೇಮಕಾತಿ

ತಿ. ತಿ. ದೇವಸ್ಥಾನಗಳ 1979 ನೇ ಆಕ್ಟ್ ನಾಲ್ಕನೇ ವಿಭಾಗದ ಮೊದಲ ಉಪವಿಭಾಗದಲ್ಲಿನ ಅಧಿಕಾರಗಳ ರೀತ್ಯಾ (1979 ರ 20ನೇ ಆಕ್ಟ್) ಆಂಧ್ರಪ್ರದೇಶದ ರಾಜ್ಯಪಾಲರು ತಿ. ತಿ ದೇವಸ್ಥಾನಗಳ ಬೋರ್ಡ್‌ಗೆ ಕೆಳಕಂಡವರನ್ನು ಅಧ್ಯಕ್ಷರು ಹಾಗೂ ಸದಸ್ಯರನ್ನಾಗಿ ನೇಮಕಮಾಡಿದ್ದಾರೆ.

1. ಶ್ರೀ ವೆಗೆಶನ ಕನಕದುರ್ಗ ವೆಂಕಟ ಸತ್ಯ ನಾರಾಯಣರಾಜು (ಶ್ರೀ ಕನಕರಾಜು) ಎಂ.ಎಲ್‌.ಎ ಅತ್ತಿಲಿ, ಪ. ಗೋದಾವರಿ ಜಿಲ್ಲೆ – ಛೇರ್ಮೆನ್.
2. ಶ್ರೀಮತಿ ನನ್ನಪನೇನಿ ರಾಜಕುಮಾರಿ, ಎಂ ಎಲ್‌.ಎ. ತೆನಾಲಿ, ಗುಂಟೂರುಜಿಲ್ಲೆ – ಸದಸ್ಯರು.
3. ಶ್ರೀ ತಲಾರಿ ರುದ್ರಯ್ಯ, ಎಂ.ಎಲ್ ಎ. ವೆನುಮೂರು, ಚಿತ್ತೂರು ಜಿಲ್ಲೆ –ಸದಸ್ಯರು.
4. ಶ್ರೀ ಗುರ್ರಂ ಮಾಧವರೆಡ್ಡಿ, ಎಂ.ಎಲ್‌.ಎ. ಮದ್ದುಲಪಲ್ಲಿ. ಮಲ್ಲಿಯಲ ತಾಲ್ಲೂಕ್ ಕರೀಮ್‌ನಗರ್ ಜಿಲ್ಲೆ – ಸದಸ್ಯರು.
5. ಶ್ರೀ ಕೋಳ್ಳ ಅಪ್ಪಲನಾಯ್ಡು, ಎಂ.ಎಲ್‌.ಎ ವಿಜಯನಗರಂ ಜಿಲ್ಲೆ – ಸದಸ್ಯರು.
6. ಶ್ರೀ ಎಲ್‌. ನರಸಿಂಗನಾಯಿಕ ಮ.ನಂ. 20–35 ಸರಸ್ವತೀನಗರ್, ಗಡ್ಡಿ ಅನ್ನಾರಂ, ಹೈದರಾಬಾದ್ – ಸದಸ್ಯರು.
7. ಶ್ರೀ ಪಿ. ಯಾದಗಿರಿ, ನ್ಯಾಯವಾದಿ, ಮಂಚೆರಿಯಲ್, ಅದಿಲಾಬಾದ್ ಜಿಲ್ಲೆ – ಸದಸ್ಯರು.
8. ಶ್ರೀ ನಂದಗೋಪಾಲ್, ಚಾರ್ಟರ್ಡ್ ಅಕೌಂಟೆಂಟ್, 8-ಸಿ, ವಿಜಯರಾಘವಾಚಾರಿ ಬೀದಿ ಟಿ. ನಗರ್, ಮದ್ರಾಸ್ – ಸದಸ್ಯರು.
9. ಶ್ರೀ ಎಚ್‌. ಆರ್‌. ಬಸವರಾಜು, ಬೆಂಗಳೂರು – ಸದಸ್ಯರು.
10. ಶ್ರೀ ಪಿ. ವೆಂಕಟೇಶ್ವರುಲು, 1-10-140/1 ಗುರುಕೃಪ: ಅಶೋಕನಗರ್, ಹೈದರಾಬಾದ್ – ಸದಸ್ಯರು.
11. ಶ್ರೀ ಬೊಬ್ಬಾಲ ಸತ್ಯನಾರಾಯಣ, ಚಿಲಕಲೂರಿಪೇಟೆ – ಸದಸ್ಯರು
12. ಕಮೀಷನರ್, ಮುಜರಾಯಿ ಇಲಾಖೆ, ಹೈದರಾಬಾದ್, ಎಕ್ಸ್ ಅಫಿಸಿಯೋ. – ಸದಸ್ಯರು,
13. ಕಾರ್ಯನಿರ್ವಹಣಾಧಿಕಾರಿ, ತಿ ತಿ. ದೇ. ತಿರುಪತಿ, ಸದಸ್ಯರು, ಎಕ್ಸ್ ಅಫಿಸಿಯೋ ಕಾರ್ಯದರ್ಶಿ

## ಆಡಳಿತ ನಿರ್ವಾಹಕ ಮಂಡಳಿಗೆ ಸದಸ್ಯರ ನೇಮಕಾತಿ

ಆಂಧ್ರಪ್ರದೇಶದ ರಾಜ್ಯಪಾಲರು 1979 ರ ತಿ ತಿ ದೇ. ಆಕ್ಟ್ ಆರನೇ ವಿಭಾಗದ 1ನೇ ಉಪ ವಿಭಾಗದ ಅಧಿಕಾರಗಳ ಅನ್ವಯ ತಿ ತಿ. ದೇವಸ್ಥಾನಗಳ ಆಡಳಿತನಿರ್ವಾಹಕ ಮಂಡಳಿಯನ್ನು ಈ ಕೆಳಕಂಡ ಸದಸ್ಯರಿಂದ ಕೂಡಿದಂತೆ ನೇಮಕ ಮಾಡಿದ್ದಾರೆ

1. ಶ್ರೀ ವೆಗೆಶನ ಕನಕದುರ್ಗ ವೆಂಕಟ ಸತ್ಯ ನಾರಾಯಣರಾಜು, (ಶ್ರೀ ಕನಕರಾಜು) ಎಂ.ಎಲ್‌.ಎ ಅತ್ತಿಲಿ, ಪ. ಗೋದಾವರಿ ಜಿಲ್ಲೆ – ಎಕ್ಸ್‌ಅಫಿಸಿಯೋ ಛೇರ್ಮೆನ್,
2. ಕಮೀಷನರ್ ಮುಜರಾಯಿ ಇಲಾಖೆ, ಹೈದರಾಬಾದ್ – ಎಕ್ಸ್‌ಅಫಿಸಿಯೋ ಸದಸ್ಯರು
3. ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ, ಎಕ್ಸ್‌ಅಫಿಸಿಯೋ ಕಾರ್ಯದರ್ಶಿ
4. ಶ್ರೀಮತಿ ನನ್ನಪನೇನಿ ರಾಜಕುಮಾರಿ, ಎಂ ಎಲ್‌.ಎ, ತೆನಾಲಿ, ಗುಂಟೂರು ಜಿಲ್ಲೆ –ಸದಸ್ಯರು

ಶ್ರೀ ಎಲ್‌. ನರಸಿಂಗನಾಯಿಕ, ಮ.ನಂ 20-3 . ಸರಸ್ವತಿನಗರ್, ಗಡ್ಡಿ ಅನ್ನಾರಂ ಹೈದರಾಬಾದ್ – ಸದಸ್ಯರು.

## ಕರ್ನಾಟಕ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿಗಳು

ರಾಜ್ಯಸಾಹಿತ್ಯ ಅಕ್ಯಾಡಮಿಯ 1983 ನೇ ಸಾಲಿನ ಪ್ರಶಸ್ತಿಗಳನ್ನು ವ್ಯಾಸರಾಯ ಬಲ್ಲಾಳ, ವಿ ಜಿ ಭಟ್ಟ, ಎ.ಕೆ. ರಾಮಾನುಜನ್, ಪದ್ಮನಾಭ ಶರ್ಮಾ, ಡಾ॥ ಹಿರೇಮಲ್ಲೂರ ಈಶ್ವರನ್, ಗವಿಶಿ ಜೋಳದರಾಶಿ ದೊಡ್ಡನಗೌಡ ಅವರಿಗೆ ನೀಡಲು ತೀರ್ಮಾನಿಸಲಾಗಿದೆ ಇವರಿಗೆಲ್ಲ ತಲಾ ಐದೂವರೆ ಸಾವಿರ ನಗದು, ಪ್ರಶಸ್ತಿ ಪತ್ರ ಹಾಗೂ ಅಕ್ಯಾಡಮಿ ಫಲಕಗಳನ್ನು ನೀಡಿ ಗೌರವಿಸಲಾಗುವುದು.

198' ರಲ್ಲಿ ಪ್ರಕಟವಾದ ವಿವಿಧ ಪ್ರಕಾರಗಳ ಕೃತಿಗಳಲ್ಲಿ ಬಹುಮಾನ ಪಡೆದ ಹಲವು ಕೃತಿಗಳೆಂದರೆ ಸಂಶೋಧನೆ – 'ಪೂರ್ಣಸೂರ್ಯಗ್ರಹಣ'– ಡಾ॥ ಎಂ. ಚಿದಾನಂದಮೂರ್ತಿ, ಮಾನವಿಕ– 'ರಾಮಾನುಜ ಸಿದ್ಧಾಂತ ದರ್ಪಣ'– ಎಚ್‌.ಜಿ. ರಾಮೈಂಗಾರ್, ಲಲಿತ ಪ್ರಬಂಧ 'ತೂಗಿದ ಚಿಂತನಗಳು'– ಡಾ॥ ರಾ.ಯ. ಧಾರವಾಡಕರ್, ಅನುವಾದ ಸೃಜನಶೀಲ 'ತಿರುಕ್ಕುರಳ್' – ಡಾ॥ ಪಾ.ಶ. ಶ್ರೀನಿವಾಸ – ಮೊದಲಾದವು. ಈ ಕೃತಿ ಕರ್ತರಿಗೆ ತಲಾ ರೂ 2000/- ಬಹುಮಾನ ನೀಡಲಾಗುವುದು. 1982 ರಲ್ಲಿ ಪ್ರಕಟವಾದ ಸೃಜನಶೀಲ ಕೃತಿಗಳಲ್ಲಿ ಡಾ॥ ವಿ ಕೆ ಗೋಕಾಕ್ ಅವರ 'ಭಾರತಸಿಂಧುರಶ್ಮಿ' ಹಾಗೂ ತ.ರಾ.ಸು. ಅವರ 'ದುರ್ಗಾಸ್ತಮಾನ' ಕೃತಿಗಳಿಗೆ ವರ್ಷದ ಶ್ರೇಷ್ಠ ಎಂಬ ಬಹುಮಾನ ನೀಡಲಾಗುವುದು. ಈ ಲೇಖಕರಿಗೆ ತಲಾ ರೂ 5000/– ಬಹುಮಾನ ನೀಡಲಾಗುವುದು.

'ರಾಮಾನುಜ ಸಿದ್ಧಾಂತ ದರ್ಪಣ' ಕೃತಿಯು ಶ್ರೀ ವೈಷ್ಣವ ಆಚಾರ, ವಿಚಾರಗಳ ಬಗೆಗಿನ ಕೃತಿಯಾಗಿದ್ದು, ತಿ.ತಿ. ದೇವಸ್ಥಾನಗಳ ಆರ್ಥಿಕ ನೆರವಿನಿಂದ ಪ್ರಕಟವಾದ ಕೃತಿ ಎಂಬುದು ಇಲ್ಲಿ ಗಮನಾರ್ಹ.

---

( 3 ನೇ ಪುಟದಿಂದ )

ಯಾವ ಮತವೂ ಇಲ್ಲ. ಯಾವ ಮತದವರೇ ಆದರೂ ಎಲ್ಲ ಈ ದೇಶದ ಜೀವನ ವಿಧಾನದಲ್ಲಿ ಬೆರೆತುಹೋದವರೇ. ಈ ಪುಣ್ಯಭೂಮಿಗೆ ಎಲ್ಲರೂ ಸುಪುತ್ರರೇ, ಆದ್ದರಿಂದ ನಡೆಯುತ್ತಿರುವುದು ಮತೋನ್ಮಾದ ಚರ್ಯೆಗಳಲ್ಲ. ಮದೋನ್ಮಾದ ಚರ್ಯೆಗಳು. ನೆರೆಯವರ ಸಂಘರ್ಷಣೆಯಿಂದಾಗಿಯೇ ಬದುಕುವ ಪರಾನ್ನಜೀವಿಗಳು ಎಲ್ಲ ಕಾಲದಲ್ಲೂ ಹಲವರು ಇದ್ದೇ ಇರುತ್ತಾರೆ. ಎದುರು ಮನೆಯ ಬೆಂಕಿಯಲ್ಲಿ ನಮ್ಮ ಬೇಳೆ ಬೇಯಿಸಿಕೊಳ್ಳುವ ಮತವೇ ಹೊರತು ಬೇರೆ ಮತ, ಧರ್ಮ, ಜಾತಿಭೇದಗಳು ಇವರಿಗೆ ಇರುವುದಿಲ್ಲ. ಆದರೆ ಈ ಉರಿಯುವ ಕೊಳ್ಳಿಯನ್ನು ಪಕ್ಕದಲ್ಲಿಟ್ಟುಕೊಂಡು ಸಮಾಜ ನಿದ್ದೆಮಾಡುತ್ತ ಮತೋನ್ಮಾದವೆಂದು ಕನವರಿಸುತ್ತದೆ. ಮತ ಒಂದು ಅಭಿಮತ ಮಾತ್ರ; ಅದು ಮಾನವತೆಯ ಮೌಲ್ಯಗಳಿಗೆ ಅಡ್ಡಿಯಾಗಬಾರದು.

'ಸಬಕೋ ಸನ್ಮತಿ ದೇ ಭಗವಾನ್'

## 1984
# ಜನವರಿ ತಿಂಗಳಿನ ಮುಖ್ಯದಿನಗಳು

| | | |
|---|---|---|
| 1 | ಭಾನುವಾರ | ತೊಂಡರಡಿಪ್ಪೊಡಿಯಾಳ್ವಾರ್ ವರ್ಷ ತಿರುನಕ್ಷತ್ರ. |
| 14 | ಶನಿವಾರ | ವೈಕುಂಠ ಏಕಾದಶಿ. |
| | | ಭೋಗಿ ಹಬ್ಬ. |
| 15 | ಭಾನುವಾರ | ಮಕರ ಸಂಕ್ರಮಣ. |
| | | ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ, |
| 16 | ಸೋಮವಾರ | ಕನೂ ಹಬ್ಬ, |
| | | ಗೋದಾ ಪರಿಣಯೋತ್ಸವ. |
| 19 | ಗುರುವಾರ | ತಿರುಮಲೆಯಲ್ಲಿ ಪ್ರಣಯಕಲಹ ಮಹೋತ್ಸವ. |
| 21 | ಶನಿವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ. |
| 24 | ಮಂಗಳವಾರ | ಕೂರತ್ತಾಳ್ವಾರ್ ವರ್ಷ ತಿರುನಕ್ಷತ್ರ |
| 26 | ಗುರುವಾರ | ಭಾರತೀಯ ಗಣತಂತ್ರ ದಿನ. |



## ರಕ್ಷಾಪತ್ರ ಸೂಚಿ

ಮುಖಪುಟ: ಡಿಸೆಂಬರ್ ನಡೆಯುವ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದ ಪ್ರಯುಕ್ತ ಶ್ರೀ ಪದ್ಮಾವತೀ ಅಮ್ಮನವರು.

ಹಿಂಬದಿಯ ಪುಟ: ತಿರುಮಲೆಯ ಒಂದು ಪಕ್ಷಿನೋಟ.

ಒಳಗಿನ ಪುಟಗಳಲ್ಲಿ: 1. ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು, ಮುಜರಾಯಿ ಕಮೀಷನರ್ ಶ್ರೀ ಮುರಳೀಧರ್ ಐ. ಎ ಎಸ್. ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರ ಸ್ವಾಮಿರೆಡ್ಡಿ ಐ. ಎ ಎಸ್. ಇವರೊಂದಿಗೆ ನೂತನ ಟ್ರಸ್ಟ್ ಬೋರ್ಡ್ ಸದಸ್ಯರು. 2. ಈಚಿನ ಮಳೆಗಳಿಂದ ತುಂಬಿದ ತಿರುಮಲೆಯ ಪಾಪವಿನಾಶಿನಿ ಡ್ಯಾಂ.

## ಸಪ್ತಗಿರಿಯ ಬಗ್ಗೆ
## ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ



Edited and Published on behalf of the T. T. Devasthanams by M. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

